## ಶಿಕ್ಷಣದ ಕುರಿತಾದ ಚಿಂತನೆಗಳು

**ರಬೀಂದ್ರನಾಥ್ ಟ್ಯಾಗೋರ್**

೧

ನಾವು ಈ ಜಗತ್ತಿನಲ್ಲಿರುವುದು, ಜಗತ್ತನ್ನು ಒಪ್ಪಿಕೊಂಡು ಜೀವಿಸಲು, ಇದನ್ನು ಅರ್ಥಮಾಡಿಕೊಳ್ಳುವುದಕ್ಕೆ ಮಾತ್ರವಲ್ಲ. ಜ್ಞಾನ ನಮಗೆ ಹೆಚ್ಚಿನ ಶಕ್ತಿಯನ್ನು ಕೊಡಬಹುದು, ಆದರೆ ಸಹಾನುಭೂತಿಯಿಂದ ನಾವು ಪರಿಪೂರ್ಣರಾಗುತ್ತೇವೆ. ಮಾಹಿತಿ ನೀಡುವುದಕ್ಕೆ ಸೀಮಿತಗೊಳ್ಳದೇ ಅಸ್ತಿತ್ವದಲ್ಲಿರುವ ಎಲ್ಲವುಗಳೊಂದಿಗೆ ಸಾಮರಸ್ಯದಿಂದ ಜೀವನ ರೂಪಿಸಿಕೊಳ್ಳಲು ಅನುವುಮಾಡಿಕೊಡುವಂತಹ ಶಿಕ್ಷಣವೇ ಉನ್ನತ ಶಿಕ್ಷಣ.

ನಮಗೆ ಎದುರಾಗುವ ಎಲ್ಲ ಸನ್ನಿವೇಶಗಳು, ಅಷ್ಟೇ ಏಕೆ ಸಾವನ್ನೂ ಮೀರುವಂತಹ ಜೀವನಕ್ಕೆ ದಿಕ್ಕು ದೊರಕಲಿ. ನಮ್ಮ ದೇವರು ನಮಗೆ ಸಿಗಲಿ. ಬಂಧನದಿಂದ ನಮ್ಮನ್ನು ಮುಕ್ತಗೊಳಿಸಿ, ವಸ್ತುಗಳ ಬದಲಿಗೆ ಅಂತರ್ಜ್ಯೋತಿಯ ಶ್ರೀಮಂತಿಕೆ ಹಾಗೂ ಅಧಿಕಾರದ ಬದಲಿಗೆ ಪ್ರೀತಿಯ ಶ್ರೀಮಂತಿಕೆಯನ್ನು ನೀಡಬಲ್ಲ ಪರಮ ಸತ್ಯಕ್ಕಾಗಿ ನಾವು ಜೀವಿಸುವಂತಾಗಲಿ.

ರಾಬಿನ್ಸನ್ ಕ್ರೂಸೋನ ಸಾಹಸದ ಕತೆಯಲ್ಲಿ ಮಾನವ ಪ್ರಕೃತಿಯೊಡನೆ ಒಂದಾದಾಗ ಅವನ ಅನುಭವಕ್ಕೆ ಬರುವ ಮಹದಾನಂದ ಅಭಿವ್ಯಕ್ತಗೊಂಡಿದೆ. ವ್ಯಕ್ತಿ ಒಬ್ಬಂಟಿಯಾಗಿ ಪ್ರಕೃತಿಯೊಂದಿಗೆ ಮುಖಾಮುಖಿಯಾಗಿ ಅವಳನ್ನು ಒಲಿಸಿಕೊಳ್ಳಲು, ಅವಳೊಂದಿಗೆ ಸಹಕರಿಸಲು, ಅವಳ ರಹಸ್ಯವನ್ನು ಬೇಧಿಸಲು ಮತ್ತು ತನ್ನೆಲ್ಲಾ ಬುದ್ಧಿವಂತಿಕೆಯನ್ನು ಬಳಸಿಕೊಂಡು ಅವಳ ಸಹಾಯವನ್ನು ಪಡೆಯಲು ಮಾಡಿದ ಸಾಹಸಗಳೆಲ್ಲ ಇದರಲ್ಲಿ ಅಭಿವ್ಯಕ್ತವಾಗಿದೆ ........... ಪಾಶ್ಚಿಮಾತ್ಯರು ಸಕ್ರಿಯವಾಗಿ ಭೂಮಿಯನ್ನು ಹೇಗೆ ಒಲಿಸಿಕೊಳ್ಳುತ್ತಾರೆ ಎನ್ನುವುದನ್ನು ತೋರಿಸುವ ಪ್ರೀತಿ-ಸಾಹಸದ ವೀರಗಾಥೆ ಇದು...... ಮಾನವನ ಬಹಿರ್ಮುಖ ಚೈತನ್ಯವು ಸೇವೆಯಲ್ಲಿ ಅಭಿವ್ಯಕ್ತಗೊಂಡು, ನಸುನಾಚಿ ಮುಸುಕಾಗಿರುವ ಜಗತ್ತಿನ ಸೌಂದರ್ಯ ಹಾಗೂ ಕ್ಷೇಮದ ಸಿರಿಯನ್ನು ಬೆಳಕಿಗೆ ತಂದಿದೆ. ಮನಸ್ಸಿನ ಏಕಾಂತದಲ್ಲಿ ವಿಶ್ವದ ಆತ್ಮವನ್ನು ಕುರಿತ ಪೌರಾತ್ಯ ಭಕ್ತನ ಆತ್ಮವಿಶ್ಲೇಷಣೆಯ ದಿವ್ಯ ದರ್ಶನವು ಈ ಬಹಿರ್ಮುಖ ಅಭಿವ್ಯಕ್ತಿಯೊಡನೆ ಸಂಯೋಗ ಹೊಂದಬೇಕೆನ್ನುವುದು ನನ್ನ ಮಹದಾಶೆಯಾಗಿತ್ತು.

ಜೀವನವೆನ್ನುವ ಸಾಹಸದಲ್ಲಿ ಶಿಕ್ಷಣವು ಚಿರಸ್ಥಾಯಿಯಾದ ಸ್ಥಾನವನ್ನು ಪಡೆದುಕೊಂಡಿದೆ.....
ಇದು, ಅವರ (ವಿದ್ಯಾರ್ಥಿಗಳ) ಜನ್ಮಜಾತ ಮೌಢ್ಯದ ಖಾಯಿಲೆಯನ್ನು ಗುಣಪಡಿಸಲು ಆಸ್ಪತ್ರೆಗಳಲ್ಲಿ ನೀಡುವ ಯಾತನಾಮಯ ಚಿಕಿತ್ಸೆಯಲ್ಲ. ಬದಲಾಗಿ, ಅವರ ಮನಸ್ಸಿನ ಚೈತನ್ಯವನ್ನು ಸಹಜವಾಗಿ ಅಭಿವ್ಯಕ್ತಿಸುವ ಆರೋಗ್ಯಕರ ಕ್ರಿಯೆಯಾಗಿದೆ.

ಪ್ರೀತಿ ಮತ್ತು ಕ್ರಿಯೆ, ಇವೆರಡೂ ಮಾಧ್ಯಮಗಳ ಮೂಲಕ ಮಾತ್ರ ಪರಿಪೂರ್ಣ ಜ್ಞಾನವನ್ನು ಪಡೆಯಲು ಸಾಧ್ಯ ಎನ್ನುವ ಸತ್ಯವನ್ನು ನಾವು ನೆನಪಿನಲ್ಲಿಡಬೇಕು.

೧

ಸುತ್ತಲಿನ ಪರಿಸರದಿಂದ ಆಹಾರವನ್ನು ಪಡೆಯಲು ಮರಕ್ಕಿರುವ ಆಂತರಿಕ ಪ್ರಜ್ಞೆಯಂತೆ ಮಕ್ಕಳಿಗೂ ಕ್ರಿಯಾಶೀಲವಾದ ಉಪಪ್ರಜ್ಞೆ (subconscious) ಇರುತ್ತದೆ. ನಿಯಮಗಳು, ಪದ್ಧತಿಗಳು, ಕಟ್ಟಡಗಳು, ಸಾಮಗ್ರಿಗಳು, ತರಗತಿಯಲ್ಲಿನ ಬೋಧನೆ ಮತ್ತು ಪಠ್ಯಪುಸ್ತಕಗಳೆಲ್ಲದಕ್ಕಿಂತಲೂ ಮಕ್ಕಳಿಗಾಗಿ ನಾವು ರೂಪಿಸುವ ಪರಿಸರ ಬಹಳ ಮಹತ್ವವುಳ್ಳದ್ದು.

ಸಮುದಾಯದಲ್ಲಿ ಸದಾಕಾಲವೂ ತನ್ನದೇ ಸಂಸ್ಕೃತಿ ವ್ಯಾಪಕವಾಗಿ ಹರಡಿರುವ ಪರಿಸರದಲ್ಲಿ ಮಾನವನಿರುತ್ತಾನೆ. ಇದರ ಪರಿಣಾಮದಿಂದಾಗಿ, ತನ್ನ ಜನಾಂಗದ ಹಿಂದಿನ ಪೀಳಿಗೆಗಳ ಕೊಡುಗೆ ಹಾಗೂ ಪರಂಪರೆಯ ಆಚರಣೆಗಳು ಬೀರುತ್ತಿರುವ ಪ್ರಭಾವಗಳ ಪ್ರವೃತ್ತಿಗಳೆಡೆಗೆ ಆತನ ಮನಸ್ಸು ಸಂವೇದನಾಶೀಲವಾಗುತ್ತದೆ.. ಇದರಿಂದಾಗಿ ಆತನು ಸರಾಗವಾಗಿ ಪುರಾತನ ಕಾಲದ ಸಕೇಂದ್ರಿತ (concentrated) ತಿಳಿವಳಿಕೆಯನ್ನು ಅಪ್ರಜ್ಞಾಪೂರ್ವಕವಾಗಿಯೇ (unconsciously) ಅಳವಡಿಸಿಕೊಳ್ಳಬಹುದು. ಆದರೆ ನಮ್ಮ ಶಿಕ್ಷಣ ಕ್ಷೇತ್ರಗಳಲ್ಲಿ ನಾವು, ಪ್ರಯಾಸದ ಯಾಂತ್ರಿಕ ಪ್ರಕ್ರಿಯೆಯ ಹೆಣಗಾಟದ ಮೂಲಕ ಮಹತ್ವವೆನಿಸಿದ ಯಾವುದೋ ವಸ್ತುವನ್ನು ಹುಡುಕುವ ಗಣಿಗಾರರಂತೆ ವರ್ತಿಸುತ್ತೇವೆಯೇ ಹೊರತು ರೈತರಂತಲ್ಲ. ಉಳುವ ರೈತನಾದರೋ ಪರಿಸರದೊಡನೆ ಸಹಾನುಭೂತಿಯ ಸಾತ್ವಿಕ ಸಂಬಂಧ ಬೆಳೆಸಿಕೊಂಡು ಪ್ರಕೃತಿಯೊಡನೆ ಪರಿಪೂರ್ಣ ಸಹಭಾಗಿತ್ವದಲ್ಲಿ ತನ್ನ ಕಾರ್ಯ ನಿರ್ವಹಿಸುತ್ತಾನೆ.

ನಮ್ಮ ಕಲಿಕಾ ಕಾರ್ಯಕ್ರಮದಲ್ಲಿ ಇದಕ್ಕೆ ಮಹತ್ವವನ್ನು ನೀಡಿ, ನನ್ನ ಸಂಸ್ಥೆಯಲ್ಲಿ ಇಂತಹ ಪರಿಸರವೊಂದನ್ನು ಸೃಜಿಸಲು ಪ್ರಯತ್ನಿಸಿದೆ. ಆತ್ಮದ ಸೂಕ್ಷ್ಮ ಸಂವೇದನೆಯನ್ನು ಬೆಳೆಸಿಕೊಳ್ಳಲು ಹಾಗೂ ಮನೋವೃತ್ತಿಯು ಸಹಾನುಭೂತಿಯ ತನ್ನ ನೈಜಸ್ವಾತಂತ್ರ್ಯವನ್ನು ಪಡೆಯಲು ಸೂಕ್ತ ಪರಿಸರ ಅತ್ಯವಶ್ಯಕ.

ಅನಾದಿಕಾಲದಿಂದಲೂ ಪ್ರಕೃತಿ ಸೌಂದರ್ಯದ ಪರಿಸರವು ಬಣ್ಣಗಳ ನಾಟ್ಯ, ಹೂವು ಮತ್ತು ಹಣ್ಣುಗಳ ವಿವಿಧ ಉಡುಗೊರೆಗಳು, ಬೆಳಗಿನ ನಲಿವು ಮತ್ತು ತಾರೆಗಳಿಂದ ಕೂಡಿದ ರಾತ್ರಿಯ ಶಾಂತಿಯೊಂದಿಗೆ ನಮಗಾಗಿ ಕಾಯುತ್ತಿದೆ. ವಸಂತ ಕಾಲದ ಆಗಮನ ಮತ್ತು ಕರುಣೆ ಇಲ್ಲದ ಬೇಸಿಗೆಯ ನಂತರ ಅನುರಣಿಸುವ ಮಳೆಯನ್ನು ಸಂಭ್ರಮಿಸುವ, ಋತುಮಾನಕ್ಕೆ ಸೂಕ್ತವಾದ ಹಾಡುಗಳನ್ನು ನಾನು ಬರೆದೆ.

೨

ಬಾಲ್ಯದಲ್ಲಿ ಜೀವನಾನುಭವದ ಬಲವಾದ ಅಪೇಕ್ಷೆ ತಣಿಯಲಾರದಷ್ಟಿರುತ್ತವೆ. ಹಾಗಾಗಿ. ಮಕ್ಕಳನ್ನು ಜೀವನ ಪ್ರವಾಹದೆದುರು ಒಡ್ಡಬೇಕು. ತಾನು ಮಾನವ ಪ್ರಪಂಚದಲ್ಲಿ ಹುಟ್ಟಿದ್ದೇನೆ

ಮತ್ತು ಇದು ತನ್ನ ಸುತ್ತಲಿನ ಪ್ರಪಂಚದೊಡನೆ ಸಾಮರಸ್ಯ ಹೊಂದಿದೆ ಎನ್ನುವ ಭಾವ ಮಗುವಿನ ಎಳೆ ಮನಸ್ಸಿನಲ್ಲಿ ಚೆನ್ನಾಗಿ ನಾಟಬೇಕು.

ಮಕ್ಕಳ ಇಂದ್ರಿಯಗಳಲ್ಲಿ ತಾಜಾ ಚೈತನ್ಯವಿರುತ್ತದೆ. ಇದರ ಮೂಲಕ ಅವರು ಪ್ರಪಂಚದ ಆಪ್ತತೆಯಲ್ಲಿ ನೇರವಾಗಿ ತೊಡಗಿಕೊಳ್ಳುತ್ತಾರೆ. ಇದು ಅವರಿಗೆ ದೊರಕಿರುವ ಮೊದಲ ಮಹತ್ತರ ಕೊಡುಗೆ. ಅವರು ಇದನ್ನು ನೇರ ಮತ್ತು ಸರಳವಾಗಿ ಸ್ವೀಕರಿಸುತ್ತಿರಬೇಕು ಹಾಗೂ ಪ್ರಪಂಚದ ನೇರ ಸಂಪರ್ಕದ ಸಾಮರ್ಥ್ಯವನ್ನು ಎಂದಿಗೂ ಕಳೆದುಕೊಳ್ಳಬಾರದು. ಪರಿಪೂರ್ಣತೆಯ ಸಲುವಾಗಿ ನಾವು ಉಳಿವಿನ (vitally) ವಿಷಯದಲ್ಲಿ ಕಾಡುಮನುಷ್ಯನಂತಿದ್ದು, (savage) ಮಾನಸಿಕವಾಗಿ ನಾಗರಿಕರಾಗಬೇಕು (civilized). ಪಕೃತಿಯೊಡನೆ ಸಹಜವಾಗಿದ್ದು, ಮಾನವರೊಡನೆ ಮಾನವೀಯತೆ ತೋರಿಸುವ ಶಕ್ತಿ ನಮ್ಮಲ್ಲಿರಬೇಕು.

ಮಕ್ಕಳಿಗೆ ಉತ್ಸಾಹ ಮತ್ತು ಶಕ್ತಿ ಪ್ರಕೃತಿಯ ಅತ್ಯುತ್ತಮ ಕೊಡುಗೆ. ನಾಗರಿಕವೆನಿಸಿದ (civilised) ನಮ್ಮ ಮನೆಗಳಲ್ಲಿ ಉತ್ಸಾಹ ಮತ್ತು ಗೌರವಾನ್ವಿತ ವರ್ತನೆಯ ನಿಯಮಾವಳಿಗಳ ನಡುವೆ ಸದಾ ಘರ್ಷಣೆ ಇರುತ್ತದೆ. ನಿರಂತರವಾಗಿರುವ ಈ ಘರ್ಷಣೆಯು, ಸಹಜವಾದುದನ್ನು ಮತ್ತು ಒಳ್ಳೆಯದನ್ನು ಅಸಹಜವಾಗಿ ದಮನಿಸಿ, ಎಲ್ಲ ರೀತಿಯ ದುಷ್ಟತನ ಮತ್ತು ತಪ್ಪು ದಾರಿಗಳನ್ನು ಹುಟ್ಟಿಸುತ್ತದೆ.

ನನಗೆ ಪದ್ಧತಿಗಳಿಗಿಂತ ಹೆಚ್ಚಾಗಿ ಜೀವನ ಸಿದ್ಧಾಂತ, ಮಾನವ ಸ್ವಭಾವದಲ್ಲಿ ಹೆಚ್ಚು ವಿಶ್ವಾಸವಿದೆ. ಮನಸ್ಸಿನ ಸ್ವಾತಂತ್ರ್ಯವೇ ಶಿಕ್ಷಣದ ಉದ್ದೇಶವೆಂದು ನಾನು ನಂಬಿದ್ದೇನೆ. ಸ್ವಾತಂತ್ರ್ಯದ ಮಾರ್ಗದಿಂದ ಮಾತ್ರವೇ ಇದನ್ನು ಸಾಧಿಸಬಹುದು. ಜೀವನದಲ್ಲಿ ಇರುವಂತೆಯೇ ಸ್ವಾತಂತ್ರ್ಯಕ್ಕೂ ಅಪಾಯ ಜವಾಬ್ದಾರಿಗಳಿರುತ್ತವೆ.

ಸ್ವಾತಂತ್ರ್ಯವೆಂದರೆ ಬರೀ ಅನಧೀನತೆ ಎಂದರೆ ಅದರಲ್ಲಿ ಹುರುಳಿಲ್ಲ. ಹಾಗಾಗಿ, ಅರ್ಥವೂ ಇಲ್ಲ. ಸಂಬಂಧಗಳ ಪರಿಪೂರ್ಣ ಸಾಮರಸ್ಯದಲ್ಲಿಯೇ ನಿರ್ದುಷ್ಟ ( perfect) ಸ್ವಾತಂತ್ರ್ಯವಡಗಿರುತ್ತದೆ. ಪ್ರಪಂಚದಲ್ಲಿ ಇರುವಿಕೆಯ ಮೂಲಕ ಮಾತ್ರ ಸಂಬಂಧಗಳ ಪರಿಪೂರ್ಣ ಸಾಮರಸ್ಯವನ್ನು ಸಾಧಿಸಲು ಸಾಧ್ಯವಾಗುತ್ತದೆಯೇ ಹೊರತು, ಪ್ರಪಂಚವನ್ನು *ಅರಿತು* ಅದಕ್ಕೆ ಪ್ರತಿಕ್ರಿಯಿಸುವುದರ ಮೂಲಕವಲ್ಲ.

ಮಾನವನಿಗೆ ಜಡತೆ ಮತ್ತು ಮೌಢ್ಯವು ಬಂಧನದ ಎರಡು ಕೆಟ್ಟ ಸ್ವರೂಪಗಳು; ಅವುಗಳ ಹಿಡಿತದಲ್ಲಿದ್ದಾಗ, ಬಂಧನದ ಅದರ ಅದೃಶ್ಯ ಗೋಡೆಗಳನ್ನು ನಮ್ಮ ಸುತ್ತಲೂ ಹೊತ್ತಿರುತ್ತೇವೆ. ಸತ್ಯದ ಜಗತ್ತಿನಲ್ಲಿ ನಮ್ಮ ಮನಸ್ಸಿನ ಸ್ವಾತಂತ್ರ್ಯಕ್ಕೆ, ಕಲಾ ಜಗತ್ತಿನ ನಮ್ಮ ಕಲ್ಪನೆಗೆ, ಮತ್ತು ಮಾನವ ಸಂಬಂಧದ ಪ್ರಪಂಚದೆಡೆಗಿನ ನಮ್ಮ ಸಹಾನುಭೂತಿಗೆ ಅನುವುಮಾಡಿಕೊಡಲು ಶೈಕ್ಷಣಿಕ ಸಂಸ್ಥೆಗಳಲ್ಲಿ ವೈಚಾರಿಕ ಸಾಮರ್ಥ್ಯವನ್ನು ಪೋಷಿಸಿಸಬೇಕಿದೆ.

ಸ್ಥಳ ಮತ್ತು ಚಲನೆಗೆ ನಿರ್ಬಂಧಗಳನ್ನು ವಿಧಿಸದಿರುವುದನ್ನೇ ಸ್ವಾತಂತ್ರ್ಯವೆನ್ನಲಾಗುವುದಿಲ್ಲ. ಅನಿರ್ಬಂಧಿತ ಮಾನವ ಸಂಬಂಧವೆಂಬ ವಿಷಯವೊಂದಿದೆ. ಇದು ಮಕ್ಕಳಿಗೂ ಅವಶ್ಯ........ ತಾಯಿಗೆ ಪ್ರಕೃತಿದತ್ತ ಕೊಡುಗೆಯಾದ ಪ್ರೀತಿಯು ಮಕ್ಕಳಿಗೆ ಅತ್ಯವಶ್ಯಕ. ಏಕೆಂದರೆ ಈ ಪ್ರೀತಿಯೇ ಸ್ವಾತಂತ್ರ್ಯ.

ನನ್ನ ಸಂಸ್ಥೆಯಲ್ಲಿ ನಾನು ಸ್ವಾತಂತ್ರ್ಯದ ಈ ಮೂರು ಅಂಶಗಳಿಗೆ ಅವಕಾಶ ನೀಡಲು ಪ್ರಯತ್ನಿಸಿದ್ದೇನೆ - ಮಾನಸಿಕ ಸ್ವಾತಂತ್ರ್ಯ, ಹೃದಯ ಸ್ವಾತಂತ್ರ್ಯ ಮತ್ತು ಇಚ್ಛಾ ಸ್ವಾತಂತ್ರ್ಯ.

೪

ಭೂಗೋಳ ಶಾಸ್ತ್ರ ಕಲಿಸುವ ನೆಪದಲ್ಲಿ ಭೂಮಿಯನ್ನು, ವ್ಯಾಕರಣ ಕಲಿಸುವ ನೆಪದಲ್ಲಿ ಭಾಷೆಯನ್ನು ನಾವು ಮಗುವಿನಿಂದ ಕಸಿದುಕೊಳ್ಳುತ್ತೇವೆ. ವೀರಕಥನಗಳನ್ನು ಕುರಿತಂತೆ ಅದಕ್ಕೆ ತೀವ್ರ ಆಸಕ್ತಿಯಿದ್ದಾಗ್ಯೂ,ದೊರಕುತ್ತಿರುವುದು ವಾಸ್ತವಾಂಶ ಮತ್ತು ದಿನಾಂಕಗಳ ನಿರೂಪಣೆ. ಮಾನವರ ಜಗತ್ತಿನಲ್ಲಿ ಹುಟ್ಟಿರುವ ಮಗುವು ಜೀವಂತ ಗ್ರಾಮೋಫೋನ್‌ಗಳಗಳ ಜಗತ್ತಿಗೆ ಗಡೀಪಾರಾಗುತ್ತಿದೆ.

ಇಂಗ್ಲೆಂಡಿನಲ್ಲಿ ಕಳ್ಳತನ ಮಾಡುವವರಿಗೆ ಗಲ್ಲು ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಹಾಗಾದರೆ, ಕಳ್ಳತನ ಮಾಡಲು *ವಿಫಲರಾದವರಿಗೆ* ಗಲ್ಲು ಶಿಕ್ಷೆಯನ್ನು ವಿಧಿಸಿ, ವಿಶ್ವವಿದ್ಯಾಲಯಗಳ ದಂಡ ಸಂಹಿತೆಯು ಮತ್ತಷ್ಟು ಕಠಿಣವಾಗುತ್ತದೆಯೇ? ಪುಸ್ತಕದಲ್ಲಿರುವ ವಿಷಯವನ್ನು ಅರ್ಥ ಮಾಡಿಕೊಳ್ಳದೆ, ಪುಸ್ತಕವನ್ನು ಕಂಠಪಾಠ ಮಾಡಿಕೊಂಡು ಪದವಿಗಳನ್ನು ಎಗರಿಸಿಕೊಳ್ಳುವುದನ್ನು ನಾವು ಕಳ್ಳತನವೆನ್ನದೆ ಇನ್ನೇನು ಹೇಳಬಹುದು? ಉಡುಪಿನೊಳಗೆ ಬಚ್ಚಿಟ್ಟುಕೊಂಡು ಪುಸ್ತಕವನ್ನು ಪರೀಕ್ಷೆ ಕೊಠಡಿಗೆ ತೆಗೆದುಕೊಂಡು ಹೋಗುವುದಕ್ಕಿಂತ ಈ ರೀತಿ ಪದವಿ ಗಳಿಸಿಕೊಳ್ಳುವುದು ಯಾವ ರೀತಿಯಲ್ಲಿ ಉತ್ತಮ ಎಂದು ಹೇಳಬಹುದು?

ಕಲಿಯುವ ಬುದ್ಧಿಮತ್ತೆ, ಮತ್ತು ಅಭಿಲಾಷೆ ಇರುವ, ಆದರೆ ವಿದೇಶೀ ಭಾಷೆಯನ್ನು ಕಲಿಯಲು ಅಸಮರ್ಥರಾದ ಸಾವಿರಾರು ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣದ ಸೌಲಭ್ಯಗಳನ್ನು ಸ್ಥಗಿತಗೊಳಿಸಿದಲ್ಲಿ, ರಾಷ್ಟ್ರೀಯ ಸರಕುಗಳನ್ನು ವ್ಯರ್ಥಗೊಳಿಸಿದಂತೆಯೇ ಸರಿ.

ಶಾಲಾಶಿಕ್ಷಕರಿಗೆ ಅವರದೇ ಉದ್ದೇಶಗಳಿರುತ್ತವೆ. ಅವರು ತಮ್ಮ ಸಿದ್ಧಮಾದರಿಯ ಕಟ್ಟುಪಾಡುಗಳಿಗೆ ಅನುಗುಣವಾಗಿ ವಿದ್ಯಾರ್ಥಿಗಳ ಮನಸ್ಸನ್ನು ರೂಪಿಸಲು ಪ್ರಯತ್ನಿಸುತ್ತಾರೆ........ ಇದು ಹೇಗೆಂದರೆ, ಹಣ್ಣಿನ ಕೆಲಸವನ್ನು ಹೂವಿನ ಹೆಗಲಿಗೇರಿಸಿದಂತೆ....... ಹೂವು, ಅಚ್ಚರಿಯ ಜಗತ್ತಿನಲ್ಲಿ ಬದುಕುತ್ತದೆ. ಆದರೆ ಹಣ್ಣು, ಬೀಜವನ್ನು ಪಕ್ವಗೊಳಿಸಲು ತನ್ನ ಹೃದಯವನ್ನು ಮುಚ್ಚಿಕೊಳ್ಳಬೇಕು.

ಮಗುವಿನ ಜೀವನದಲ್ಲಿ ಉದ್ದೇಶದ ಆವಶ್ಯಕತೆ ಇರುವುದನ್ನು ಗುರುತಿಸುವುದು ಬಹಳ ಮುಖ್ಯ.

ಮಗುವಿಗೆ ಆ ಕ್ಷಣದ ಇರುವಿಕೆಯನ್ನು ಮೀರಿದ ಪ್ರಜ್ಞಾಪೂರ್ವಕ ಜೀವನೋದ್ದೇಶ ಇರುವುದಿಲ್ಲ. ಮಾಹಿತಿ ಸಂಗ್ರಹಣೆಯನ್ನು ಆಯ್ಕೆಮಾಡಿಕೊಳ್ಳುವ ಒತ್ತಡವಿಲ್ಲದಿರುವುದರಿಂದ ಮಗು ತನಗಿರುವ ಪರಿಪೂರ್ಣ ಅವಧಾನದ (attention) ಸ್ವಾತಂತ್ರ್ಯದಲ್ಲಿ ತನ್ನ ಸುತ್ತಲಿರುವುದೆಲ್ಲವನ್ನೂ ನೋಡುತ್ತದೆ, ಎಲ್ಲ ಶಬ್ದಗಳನ್ನೂ ಕೇಳಿಸಿಕೊಳ್ಳುತ್ತದೆ.

ಮನಸ್ಸನ್ನು ಕೇಂದ್ರೀಕರಿಸುವುದರ ಮೂಲಕ ಅತ್ಯಂತ ಉತ್ತಮ ಶಿಕ್ಷಣ ನೀಡಬಹುದೆನ್ನುವ ದೃಷ್ಟಿಕೋನ ಶಿಕ್ಷಕರಲ್ಲಿದೆ; ಮನಸ್ಸನ್ನು ಹರಿಯಬಿಡುವುದೇ ಉತ್ತಮ ಮಾರ್ಗವೆಂದು ಪ್ರಕೃತಿಮಾತೆಗೆ ತಿಳಿದಿದೆ. ನಾವು ಮಕ್ಕಳಾಗಿದ್ದಾಗ ಇಂತಹ ಮನಶ್ಶಕ್ತಿಯ ಪ್ರಸರಣ, ಅನಿರೀಕ್ಷಿತ ಅಚ್ಚರಿಗಳ ಮೂಲಕ ಅನೇಕ ವಾಸ್ತವಾಂಶಗಳನ್ನು ಅರಿತೆವು.... ಮಕ್ಕಳಿಗೆ ತಾಜಾ ವಾಸ್ತವಾಂಶಗಳು ದೊರಕಿದಾಗ ಅದರ ಬೆರಗು ಅವರ ಮನಸ್ಸನ್ನು ಸಂಪೂರ್ಣವಾಗಿ ಕ್ರಿಯಾಶೀಲಗೊಳಿಸುತ್ತದೆ.

ಮಕ್ಕಳ ಮೊದಲ ಪ್ರಮುಖ ಶಿಕ್ಷಣವೆಂದರೆ, ಸಾಮಯಿಕ ಕಲ್ಪನೆ. (improvisation). ಸಾಧನೆಯ ಅಚ್ಚರಿಗಳ ಮೂಲಕ ತಮ್ಮ ಸಾಮರ್ಥ್ಯಗಳನ್ನು ಅನ್ವೇಷಿಸುವ ಸಂದರ್ಭಗಳನ್ನು ನಿರಂತರವಾಗಿಒದಗಿಸುವ ಸಲುವಾಗಿ, ಸಿದ್ಧ ಮಾದರಿಗಳನ್ನು ಎಡೆಬಿಡದಂತೆ ಮಕ್ಕಳ ಮೇಲೆ ಹೇರುವುದನ್ನು ತೊರೆಯಬೇಕು. ಇದರರ್ಥವನ್ನು ನೇರವಾಗಿ ಹೇಳಬೇಕೆಂದರೆ, ಮಕ್ಕಳಿಗೆ ಕೊಡಬೇಕಿರುವುದು ಸರಳ ಜೀವನದ ಪಾಠವಲ್ಲ, ಸೃಜನಶೀಲ ಜೀವನದ ಪಾಠ.

೫

ನನ್ನ ಮಕ್ಕಳು ಈ ಪ್ರಪಂಚದೊಳಗೆ ಬಂದಾಗ ಅವರಿಗೆ ತವರಿಗೆ ಬಂದ ನೈಜ ಅನುಭವವನ್ನು ಒದಗಿಸುವ ಸಿದ್ಧತೆಗಳನ್ನು ಮಾಡಿಕೊಂಡಿದ್ದೆ. ಮುಕ್ತ ವಾತಾವರಣದ ಹೊರಾಂಗಣದಲ್ಲಿ ಮರದ ನೆರಳಿನ ಕೆಳಗೆ ಕಲಿಯುವ ಇತರ ವಿಷಯಗಳ ಜೊತೆಗೆ ಸಂಗೀತ ಮತ್ತು ಚಿತ್ರಕಲೆಯನ್ನು ಕಲಿತರು; ನಾಟಕಗಳ ಪ್ರದರ್ಶನಗಳನ್ನು ಮಾಡಿದರಲ್ಲದೆ, ಚೇತನದ ಅಭಿವ್ಯಕ್ತಿಯೆನಿಸಿದ ಚಟುವಟಿಕೆಗಳಲ್ಲಿಯೂ ತೊಡಗಿದ್ದರು.

ಮಾನವರ ಜೀವನದ ಅನೇಕ ಅಂಶಗಳನ್ನು ಬರೀ ಪದಗಳ ಭಾಷೆಯ ಮೂಲಕ ಅಭಿವ್ಯಕ್ತಿಸಲಾಗುವುದಿಲ್ಲವಾದ್ದರಿಂದ ಇತರ ಭಾಷೆಗಳನ್ನು ಅನ್ವೇಷಿಸಬೇಕಾಗುತ್ತದೆ - ಅವೇ ಗೆರೆ ಮತ್ತು ಬಣ್ಣಗಳ ಭಾಷೆ, ಶಬ್ದ ಮತ್ತು ಚಲನೆಗಳ ಭಾಷೆ. ಇವುಗಳಲ್ಲಿ ಪರಿಣತಿ ಹೊಂದಿದರೆ ಇಡೀ ಪ್ರಕೃತಿಯನ್ನು ಅಭಿವ್ಯಕ್ತಿಸಲು ಸಾಧ್ಯವಾಗುತ್ತದೆ. ಇದರ ಜೊತೆಗೆ, ಎಲ್ಲ ಕಾಲಘಟ್ಟದಲ್ಲಿಯೂ ಮಾನವನು ವಿವಿಧ ರೀತಿಗಳಲ್ಲಿ ತನ್ನ ಅಂತರಾಳವನ್ನು ತೆರೆದಿಡುವ ಪ್ರಯತ್ನಗಳನ್ನು ಮಾಡಿರುವುದರಿಂದ ಮಾನವನನ್ನು ಅರ್ಥ ಮಾಡಿಕೊಳ್ಳುವುದಕ್ಕೂ ಸಾಧ್ಯವಾಗುತ್ತದೆ. ಶಿಕ್ಷಣದ

ಮುಖ್ಯ ಉದ್ದೇಶ ವಾಸ್ತವಾಂಶಗಳನ್ನು ಸಂಗ್ರಹಿಸುವುದು ಮಾತ್ರವಲ್ಲ, ಬದಲಿಗೆ ಮಾನವರನ್ನು ಅರಿಯುವುದು ಮತ್ತು ತನ್ನನ್ನು ಇತರರು ಅರಿಯುವಂತೆ ಮಾಡುವುದು.

ಕನಿಷ್ಟಪಕ್ಷ ಸ್ವಲ್ಪಮಟ್ಟಿಗಾದರೂ, ಬುದ್ಧಿವಂತಿಕೆಯ ಭಾಷೆ ಮಾತ್ರವಲ್ಲದೆ, ವ್ಯಕ್ತಿತ್ವದ ಭಾಷೆಯಲ್ಲೂ ಪರಿಣತಿ ಸಾಧಿಸುವುದು ಪ್ರತಿಯೊಬ್ಬ ವ್ಯಕ್ತಿಯ ಕರ್ತ್ಯವ್ಯವಾಗಿದೆ. ವ್ಯಕ್ತಿತ್ವದ ಭಾಷೆ ಕಲೆಯ ಭಾಷೆಯೂ ಆಗಿರುತ್ತದೆ.

ಇದು ಮಾನವನ ಅತ್ಯಂತ ಉತ್ಕೃಷ್ಟವಾದ ವಾಸ್ತವ ಜಗತ್ತು - ಅತ್ಯಂತ ವಿಶಾಲವಾದ ಮತ್ತು ಗಹನವಾದ ಜಗತ್ತು – ಮಾನವನ ಸೃಜನಶೀಲ ಪ್ರವೃತ್ತಿಯನ್ನುಳ್ಳ ವಿಕಾಸಶೀಲ ಜಗತ್ತು.

ಧರ್ಮವನ್ನು ಪಾಠಗಳ ಮೂಲಕ ಹೇಳಿಕೊಡಲು ಎಂದಿಗೂ ಸಾಧ್ಯವಿಲ್ಲ. ಜೀವಿಕೆಯಲ್ಲಿ (living) ಧರ್ಮವಿದ್ದುದೇ ಆದರೆ, ಅಲ್ಲಿ ಪಾಠವೂ ಇರುತ್ತದೆ.... ಶಾಲಾ ಪಠ್ಯಕ್ರಮದ ವಿವಿಧ ವಿಷಯಗಳ ಜೊತೆಗೆ ಧರ್ಮವನ್ನೂ ಒಂದು ವಿಷಯವೆಂಬಂತೆ ಪರಿಗಣಿಸಿ; ದಿನಕ್ಕಿಷ್ಟು, ವಾರಕಿಷ್ಟು ಎಂದು ನಿರ್ದಿಷ್ಟವಾಗಿ ಪಾಲು ಮಾಡಿ ಪಾಠಮಾಡಲಾಗುವುದಿಲ್ಲ. ನಮ್ಮ ಸಂಪೂರ್ಣ ಇರುವಿಕೆಯ ಸತ್ಯವಿದು, ಅನಂತದೊಡನೆ ನಮ್ಮ ವೈಯುಕ್ತಿಕ ಸಂಬಂಧದ ಪ್ರಜ್ಞೆ ಇದು. ನಮ್ಮ ಜೀವನದ ನಿಜವಾದ ಗುರುತ್ವ ಕೇಂದ್ರುವಿದು.

೬

ತನ್ನೊಳಗಿನ ಮಗುವನ್ನು ಕಳೆದುಕೊಂಡಿರುವ ವ್ಯಕ್ತಿ, ಮಕ್ಕಳಿಗೆ ಶಿಕ್ಷಣವನ್ನು ನೀಡುವ ಮಹತ್ವದ ಕೆಲಸಕ್ಕೆ ಸಂಪೂರ್ಣವಾಗಿ ಅನರ್ಹನಾಗುತ್ತಾನೆ.

ಬಹಳ ಮುಖ್ಯವೆನಿದಾಗ್ಯೂ, ನಾವು ಮರೆತುಬಿಡುವ ವಿಷಯವೆಂದರೆ, ತಾನು ಕಲಿಯುವುದನ್ನು ನಿಲ್ಲಿಸಿರುವ ಶಿಕ್ಷಕನೊಬ್ಬ ಮತ್ತೊಬ್ಬರಿಗೆ ಏನನ್ನೂ ಕಲಿಸಲಾರ.... ನಮ್ಮ ಶಾಲೆಯ ಕಲಿಕೆಯಲ್ಲಿನ ಬಹುಪಾಲು ಭಾಗವು ವ್ಯರ್ಥವಾಗುವುದೇಕೆಂದರೆ, ನಮ್ಮ ಅನೇಕ ಶಿಕ್ಷಕರಿಗೆ ಅವರ ವಿಷಯಗಳು, ಹಿಂದೊಮ್ಮೆ ಜೀವಂತವಿದ್ದುದರ ಜಡ ಪ್ರತಿರೂಪಗಳೆನಿಸಿವೆ. ಜ್ಞಾನದ ನಿಟ್ಟಿನಲ್ಲಿ ಅವರಿಗೆ ಅದರ ಪರಿಚಯ ಇರುತ್ತದೆಯಾದರೂ, ಕ್ರಿಯಾಶೀಲ ಪ್ರೀತಿಯ ಸಂಪರ್ಕವಿರುವುದಿಲ್ಲ.

ಇನ್ನೊಬ್ಬರಿಗೆ ಕಲಿಸುವ ತವಕ, ಅದರಲ್ಲೂ ಆಧ್ಯಾತ್ಮ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕಲಿಸುವ ತವಕವು ಬಹಳ ತೀವ್ರವಾಗಿದ್ದಾಗ, ಅದರ ಫಲಿತಾಂಶ ಕನಿಷ್ಟ ಪ್ರಮಾಣದ್ದಾಗಿರುತ್ತದೆ, ಅದರಲ್ಲಿ ಸುಳ್ಳು ಸಹ ಸೇರಿಕೊಂಡಿರುತ್ತದೆ ಎನ್ನುವುದು ನನ್ನ ಅನುಭವದ ಮಾತು.

ಎರಡು ಮನಸ್ಸುಗಳ ನಡುವಿನ ಸಂಪರ್ಕ ಹೆಚ್ಚಿದಾಗ ಆನಂದದ ಭಾವವು ಸೃಜಿಸುತ್ತದೆ. ಇದು ಸೃಷ್ಟಿಕಾರಕ ಆನಂದ. ಆಶ್ರಮದಲ್ಲಿ ಕೊಡುವ ಶಿಕ್ಷಣವು ಈ ಆನಂದದ ಸಹಜ ಪ್ರವೃತ್ತಿಯನ್ನು

ಹೊಂದಿರಬೇಕು. ಈ ಸೃಜನಶೀಲ ಆನಂದವಿಲ್ಲದೆ ಕರ್ತವ್ಯ ಪ್ರಜ್ಞೆ ಮಾತ್ರ ಇದ್ದವರ ದಾರಿ ಇದಕ್ಕಿಂತ ಭಿನ್ನವಾದದ್ದು.

ಸದಾ ಎಚ್ಚರವಾಗಿರುವ ಮನಸ್ಸಿನೊಂದಿಗಿನ ಈ ಕ್ರಿಯಾಶೀಲ ಸಂಪರ್ಕವು ಆಶ್ರಮ ಶಿಕ್ಷಣದ ಅತ್ಯಂತ ಮೌಲ್ಯಯುತ ಅಂಶವೇ ಹೊರತು, – ಅಧ್ಯಯನದ ಯಾವುದೇ ವಿಷಯ, ಪದ್ಧತಿ ಅಥವಾ ಯಾವುದೇ ಸಾಮಾನು ಸರಂಜಾಮುಗಳಲ್ಲ. ಗುರುವು ಪ್ರತಿಕ್ಷಣವೂ ತನ್ನನ್ನೇ ತಾನು ಕಂಡುಕೊಳ್ಳುತ್ತಿರುವ ಕಾರಣದಿಂದಾಗಿ, ತನ್ನ ಅಗಾಧತೆಯಿಂದ ಕೊಡುಗೆ ನೀಡುವುದು ಸುಲಭ ವಾಗುತ್ತದೆ.

೭

ಶಿಕ್ಷಣದ ಭವ್ಯ ಸೌಧವನ್ನು ಎಲ್ಲರೂ ಸೇರಿ ಕಟ್ಟಬೇಕು. ಶಿಕ್ಷಕರು, ಆಯೋಜಕರು ಮಾತ್ರವಲ್ಲದೆ ವಿದ್ಯಾರ್ಥಿಗಳೂ ಇದರಲ್ಲಿ ಕೈ ಜೋಡಿಸಬೇಕು. ಇದನ್ನು ಕಟ್ಟಲು ವಿದ್ಯಾರ್ಥಿಗಳು ತಮ್ಮ ಜೀವನದ ಸ್ವಲ್ಪ ಭಾಗವನ್ನು ಮುಡಿಪಾಗಿಡಬೇಕು. ಇದರಿಂದ ತಮ್ಮದೇ ಜಗತ್ತಿನಲ್ಲಿದ್ದೇವೆನ್ನುವ ಭಾವನೆ ಅವರಲ್ಲಿ ಮೂಡುತ್ತದೆ. ಇದು ವ್ಯಕ್ತಿಗೆ ದೊರಕುವ ಅತ್ಯುತ್ತಮ ಸ್ವಾತಂತ್ರ್ಯದ ಅನುಭವ.

ಸಮಾಜದ ಮೂಲ ಅಂಶಗಳಿಂದ, ಜನಜೀವನ ಧಾರೆಯಿಂದ ಶಿಕ್ಷಣವನ್ನು ಬೇರ್ಪಡಿಸಬಾರದು.

ನಮ್ಮ ಸಾಂಸ್ಕೃತಿಕ ಕೇಂದ್ರವು ಭಾರತದ ಬೌದ್ಧಿಕ ಜೀವನದ ಕೇಂದ್ರ ಮಾತ್ರವಲ್ಲ, ಇದು ದೇಶದ ಆರ್ಥಿಕತೆಯ ಕೇಂದ್ರವೂ ಆಗಿರಬೇಕು. ಭೂಮಿಯ ಸಾಗುವಳಿ ಆಗಬೇಕು, ಹಸುಗಳ ಸಾಕಣಿಕೆ ನಡೆಯಬೇಕು. ಇವುಗಳ ಮೂಲಕ ಕೇಂದ್ರದಲ್ಲಿ ವಿದ್ಯಾರ್ಥಿಗಳನ್ನೂ ಒಳಗೊಂಡಂತೆ ಎಲ್ಲರ ಹೊಟ್ಟೆ ತುಂಬಬೇಕು. ಅಗತ್ಯವಿರುವ ಎಲ್ಲ ಸಾಮಗ್ರಿಗಳನ್ನೂ ಅತ್ಯಂತ ಸೂಕ್ತ ರೀತಿಯಲ್ಲಿ ಅತ್ಯುತ್ತಮ ವಸ್ತುಗಳನ್ನು ಬಳಸಿ ತಯಾರಿಸಬೇಕು. ಇದಕ್ಕೆ ವಿಜ್ಞಾನದ ಸಹಾಯ ಪಡೆಯಬಹುದು. ಇದರ ಅಸ್ತಿತ್ವವು, ಸಹಕಾರೀ ಸಿದ್ಧಾಂತದ ಹಿನ್ನೆಲೆಯಲ್ಲಿ ಕಾರ್ಯವನ್ನು ನಿರ್ವಹಿಸುವ ತನ್ನ ಉದ್ಯಮಗಳ ಸಾಫಲ್ಯವನ್ನು ಅವಲಂಬಿಸತಕ್ಕದ್ದು. ಇಂತಹ ಸಂದರ್ಭದಲ್ಲಿ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ನಡುವೆ ಅವಶ್ಯಕತೆಯ ಜೀವಂತ ಮತ್ತು ಸಕ್ರಿಯ ಬಂಧವೇರ್ಪಡುತ್ತದೆ. ಇದರ ಮೂಲಕ ನಮಗೆ ನಿಜವಾದ ಔದ್ಯಮಿಕ ತರಬೇತಿ ದೊರಕುತ್ತದೆ. ಇದಕ್ಕೆ ಮೂಲ ಪ್ರೇರಣೆ ಲಾಭದ ದುರಾಸೆಯಾಗಿರುವುದಿಲ್ಲ.

ಈ ರೀತಿಯ ಸಂಸ್ಥೆಯು ತನ್ನ ಸುತ್ತಲಿನ ಎಲ್ಲ ಹಳ್ಳಿಗಳನ್ನು ಒಗ್ಗೂಡಿಸಿ, ತನ್ನೆಲ್ಲ ಆರ್ಥಿಕ ಪ್ರಯತ್ನಗಳಲ್ಲಿ ಅವುಗಳನ್ನು ತನ್ನೊಂದಿಗೆ ಅತ್ಯವಶ್ಯಕವಾಗಿ ತೊಡಗಿಸಿಕೊಳ್ಳಬೇಕು. ಹಳ್ಳಿಗಳ ಜನರ ವಸತಿ, ಶೌಚ, ನೈತಿಕ ಮತ್ತು ಬೌದ್ಧಿಕ ಜೀವನದ ಅಭಿವೃದ್ಧಿಯು, ಈ ಚಟುವಟಿಕೆಗಳ ಸಾಮಾಜಿಕ ಉದ್ದೇಶದ ಗುರಿಯಾಗಬೇಕು.

ಹಿನ್ನೆಲೆಯಲ್ಲಿ ಇಡೀ ಕ್ಯಾನ್ವಾಸ್ ಇದ್ದಾಗ ಮಾತ್ರ ಚಿತ್ರವೊಂದರ ಸೌಂದರ್ಯವು ಸ್ಪಷ್ಟವಾಗಿ ಗೋಚರಿಸುವಂತೆ, ಇಡೀ ದೇಶದಲ್ಲಿ ಎಲ್ಲರಿಗೂ ಶಿಕ್ಷಣ ದೊರೆತರೆ ಮಾತ್ರ ಅದು ನೈಜ ಮತ್ತು ಪರಿಣಾಮಕಾರಿಯಾಗಿರಲು ಸಾಧ್ಯ.

ತನ್ನ ಸಂಸ್ಕೃತಿಯ ಆರಂಭದ ಹಂತದಲ್ಲಿ, ಲ್ಯಾಟಿನ್ ಭಾಷೆಯು ಇಡೀ ಯುರೋಪಿನ ಕಲಿಕಾ ಭಾಷೆಯಾಗಿತ್ತು.... ಯುರೋಪಿನ ಭವ್ಯ ದೇಶಗಳು ತಮ್ಮ ತಮ್ಮ ಭಾಷೆಗಳನ್ನು ಸೃಷ್ಟಿಸಿಕೊಂಡ ನಂತರವೇ ಪಾಶ್ಚಿಮಾತ್ಯ ದೇಶಗಳಲ್ಲಿ ಸಂಸ್ಕೃತಿಗಳ ಒಕ್ಕೂಟವು ಸಾಧ್ಯವಾಯಿತು. ಅವರ ಮಾರ್ಗಗಳಲ್ಲಿನ ವ್ಯತ್ಯಾಸಗಳು, ಯೂರೋಪಿನ ಚಿಂತನೆಗಳ ಕೊಡು-ಕೊಳ್ಳುವಿಕೆಯನ್ನು ಹೆಚ್ಚು ಸಮೃದ್ಧಗೊಳಿಸಿತಲ್ಲದೆ, ವೈವಿಧ್ಯಮಯವಾಗಿ, ಸಕ್ರಿಯಗೊಳಿಸಿತು. ಒಂದಾನೊಂದು ಕಾಲದಲ್ಲಿ ಭಾರತದಲ್ಲಿ ಸಹ ಸಂಸ್ಕೃತವು ಸಂಸ್ಕೃತಿಯ ಸಾಮಾನ್ಯ ಭಾಷೆಯಾಗಿತ್ತು. ಆದರೆ, ಭಾರತಮಾತೆಯ ಚಿಂತನೆಯ ಕೊಡು-ಕೊಳ್ಳುವಿಕೆಯು ಪರಿಪೂರ್ಣವಾಗಲು ಅವಳ ಪ್ರಾದೇಶಿಕ ಭಾಷೆಗಳು ನಿರ್ದುಷ್ಟ (perfect) ಉತ್ಕೃಷ್ಟತೆಯ ಸಾಮರ್ಥ್ಯವನ್ನು ಸಾಧಿಸಿಕೊಳ್ಳಬೇಕು. ಅವುಗಳ ಮೂಲಕ ಭಾರತದಲ್ಲಿರುವ aವಿವಿಧ ಜನಾಂಗಗಳ ವೈವಿಧ್ಯಮಯ ಅಸಾಧಾರಣ ಪ್ರತಿಭೆಗಳು ಸಂಪೂರ್ಣವಾಗಿ ವ್ಯಕ್ತಗೊಳ್ಳಲು ಸಾಧ್ಯವಾಗುತ್ತದೆ.

ಪ್ರಸಕ್ತವಾಗಿ ನಡೆದಿರುವಂತೆ, ಜನಾಂಗಗಳ ಒಟ್ಟುಗೂಡುವಿಕೆಯು ಕೇವಲ ಜನಸ್ತೋಮದ ಗುಂಪುಗೂಡುವಿಕೆಯಾಗಬಾರದು. ಅಲ್ಲಿ ಸಂಬಂಧಗಳ ಬಂಧವೇರ್ಪಡಬೇಕು. ಇಲ್ಲದಿದ್ದರೆ, ಒಬ್ಬರನ್ನೊಬ್ಬರು ಟೀಕಿಸುತ್ತಾರೆ. ಪ್ರತಿಯೊಂದು ಮಗುವೂ ಪ್ರಸಕ್ತ ಕಾಲದ ಒಟ್ಟಾರೆ ಉದ್ದೇಶವನ್ನು ಗ್ರಹಿಸಲು ಹಾಗೂ ಅದನ್ನು ಸಾಧಿಸಲು ಅಗತ್ಯವಾದ ಸಾಮರ್ಥ್ಯವನ್ನು ಶಿಕ್ಷಣವು ನೀಡಬೇಕು.

ಭಿನ್ನತೆಗಳನ್ನು ಸೃಷ್ಟಿಸುವ ಅಭ್ಯಾಸವನ್ನು ರೂಢಿಸಿಕೊಂಡು, ರಾಷ್ಟ್ರೀಯ ಪೂರ್ವಗ್ರಹಗಳನ್ನು ಪೋಷಿಸುವ ಮೂಲಕ ಕಾಲದ ಉದ್ದೇಶವನ್ನು ಅಸಫಲಗೊಳಿಸಬಾರದು. ಮಾನವ ಜನಾಂಗಗಳ ನಡುವೆ ಅತ್ಯಂತ ಸಹಜ ಭಿನ್ನತೆಗಳಿರುತ್ತವೆ. ಆ ಭಿನ್ನತೆಗಳನ್ನು ಗೌರವಿಸಬೇಕು, ಕಾಪಾಡಬೇಕು. ಇಲ್ಲಿ ಕಾಣುವ ಪರಸ್ಪರ ವಿರೋಧಿ ನೆಲೆಗಳ ಮೂಲಕ ಸತ್ಯವನ್ನು ಕಂಡುಹಿಡಿಯುವುದು ಹಾಗೂ ವಿಭಿನ್ನತೆಗಳ ನಡುವೆಯೂ ಏಕತೆಯನ್ನು ಸಾಧಿಸುವುದು ನಮ್ಮ ಶೈಕ್ಷಣಿಕ ಧ್ಯೇಯವಾಗಬೇಕು.



ಆಶ್ರಮ ಶಾಲೆಯ ಒಂದು ತರಗತಿ

ಮನೀಂದ್ರಭೂಷಣ್ ಗುಪ್ತ



## ಅಧ್ಯಾಯ ೧೨

## ಶಿಕ್ಷಕ

ಅಸ್ಪಷ್ಟವಾಗಿದ್ದ ದೈವತ್ವದ ಪರಮಸತ್ಯ ನನ್ನ ಪ್ರಜ್ಞೆಯಲ್ಲಿ ಹೇಗೆ ಮಾನವನ ಅನುಭೂತಿಯಾಗಿ ಘನೀಕರಿಸಲ್ಪಟ್ಟಿತು ಎನ್ನುವುದನ್ನು ನಾನು ಈಗಾಗಲೇ ವಿವರಿಸಿದ್ದೇನೆ. ಅದು ಏಕಕಾಲದಲ್ಲಿ

ಸ್ಪಷ್ಟ ಹಾಗೂ ಪರಿಮಿತವಾಗಿದ್ದು, ಎಲ್ಲ ಜನರಲ್ಲಿ ವ್ಯಕ್ತಗೊಳ್ಳುವ ಅನಂತ ರೂಪವೂ ಆಗಿರುತ್ತದೆ. ದೇವರು ವ್ಯಕ್ತಗೊಂಡ ಅನೇಕ ರೀತಿಗಳಲ್ಲಿ ಇದೂ ಒಂದಾಗಿರಬಹುದು. ಇದರಲ್ಲಿ ಮಾನವ ಮತ್ತು ಅವನ ವಿಶ್ವದ ಗ್ರಹಿಕೆ ಇದೆ. ಆದರೆ ಮಾನವರಾಗಿ ನಮಗಿರುವ ಮಿತಿಗಳಿಂದಾಗಿ ನಮ್ಮ ಊಹೆಗೂ ಮಿಗಿಲಾದ ಇತರ ರೂಪಗಳಲ್ಲಿ ದೇವರು ಪ್ರಕಟಗೊಂಡಿದ್ದರೆ ಅದನ್ನು ಅರಿಯುವುದಿರಲಿ, ಕಲ್ಪಿಸಿಕೊಳ್ಳುವುದು ಸಹ ನಮಗೆ ಅಸಾಧ್ಯ. ಹಾಗಾಗಿ, ಧರ್ಮಶಾಸ್ತ್ರಗಳು ದೇವರಿಗೆ ಅನೇಕಾನೇಕ ರೂಪ ಲಕ್ಷಣಗಳನ್ನು ಹೊರಿಸಿರಬಹುದು. ವಾಸ್ತವದಲ್ಲಿ, ದೇವರು ಎಂಬುದು, ಮಾನವನ ಅನಂತ ಆದರ್ಶವಾಗಿದ್ದು, ಮಾನವರು ತಮ್ಮ ಸಾಮೂಹಿಕ ವಿಕಾಸದಲ್ಲಿ ಆತನೆಡೆಗೆ ಸಂಚಾಲಿತರಾಗುತ್ತಾರೆ. ವ್ಯಕ್ತಿಗತವಾಗಿ ಅವರು ಈ ಆದರ್ಶದೊಡನೆ ಪ್ರೀತಿಯ ಸಮ್ಮಿಲನವನ್ನು ಬಯಸುತ್ತಾರೆ ಹಾಗೂ ಇದರಲ್ಲಿ ತಂದೆಯ, ಸಹಚರನ ಮತ್ತು ಪ್ರೀತಿಪಾತ್ರರ ಆದರ್ಶವನ್ನು ಕಾಣುತ್ತಾರೆ.

ನಾನು ನನ್ನ ಸಾಹಿತ್ಯಕ ಕೃಷಿಯ ಏಕಾಂತವಾಸದಿಂದ ಹೊರಗೆ ಬಂದು, ವ್ಯಾವಹಾರಿಕ ಚಟುವಟಿಕೆಗಳ ಪ್ರಪಂಚದಲ್ಲಿ ಭಾಗಸ್ಥನಾಗಲು ಒತ್ತಾಯಪಡಿಸಿದ್ದು, ಅಪ್ರಜ್ಞಾಪೂರ್ವಕವಾಗಿ ನನ್ನ ಮನಸ್ಸಿನಲ್ಲಿ ಮಥಿಸುತ್ತಿದ್ದ ಮಾನವೀಯ ದೈವತ್ವದ ಈ ಕಲ್ಪನೆಯೇ ಎಂಬುದರ ಬಗ್ಗೆ ನನಗೆ ಖಾತರಿಯಿದೆ. ಧ್ಯಾನದಲ್ಲಿ ಅನಂತತೆಯನ್ನು ಕುರಿತಂತೆ ದೊರೆಯುವಏಕಾಂತದ ಸಂತೃಪ್ತಿ ನಿಂತುಹೋಯಿತು. ಮೌನ ಆರಾಧನೆಗಾಗಿ ನಾನು ಬಳಸುತ್ತಿದ್ದ ಪದ್ಯಗಳ ಸ್ಫೂರ್ತಿಯ ಸೆಲೆಗಳು ನನಗೇ ತಿಳಿಯದಂತೆ ಬತ್ತಿಹೋಗಿದ್ದವು. ಸ್ವಹಿತಾಸಕ್ತಿಯಿಲ್ಲದ ಸೇವೆಯ ಮೂಲಕ ಮಾನವ ಜೀವನದಲ್ಲಿನ ಆಧ್ಯಾತ್ಮಿಕ ಆತ್ಮಸಾಕ್ಷಾತ್ಕಾರವೇ ನನ್ನ ಅವಶ್ಯಕತೆ ಎಂಬ ಅಸ್ಪಷ್ಟ ಭಾವವು ನನ್ನಲ್ಲಿ ಮೂಡಿತೆಂಬುದು ನಿಸ್ಸಂಶಯ. ಆ ಸಮಯದಲ್ಲಿಯೇ ನಾನು ಬಂಗಾಲದಲ್ಲಿ ನಮ್ಮ ಮಕ್ಕಳಿಗಾಗಿ ಶೈಕ್ಷಣಿಕ ಸಂಸ್ಥೆಯನ್ನು ಪ್ರಾರಂಭಿಸಿದೆ. ಇದಕ್ಕೆ ತನ್ನದೇ ಆದ ವಿಶಿಷ್ಟ ಗುಣಲಕ್ಷಣಗಳಿವೆ. ಇದು ಇನ್ನೂ ತನ್ನ ಸಾರ್ಥಕತೆಯನ್ನು ಕಂಡುಕೊಳ್ಳಲು ತೀವ್ರವಾಗಿ ಪ್ರಯತ್ನಿಸುತ್ತಿದೆ. ದೈವತ್ವ ಕಾಣಲು ನಾನು ಕಟ್ಟಿದ ಜೀವಂತ ದೇವಸ್ಥಾನವಿದು. ಜ್ಞಾನ ಮತ್ತು ಸೇವೆ, ಆನಂದ ಮತ್ತು ಸೃಜನಶೀಲ ಕಾರ್ಯಗಳಿಂದ ಪರಿಪೂರ್ಣ ಜೀವನವನ್ನು ಜೀವಿಸಲು ಸಾಧ್ಯ. ಹಾಗಾಗಿ ಇಂತಹ ಸ್ಥಳದಲ್ಲಿ ಶಿಕ್ಷಣವು ಪರಿಪೂರ್ಣ ಜೀವನದ ಸಿದ್ಧತೆಯಾಗುತ್ತದೆ. ಇದರ ಅಗತ್ಯವಿದ್ದದ್ದು ನನಗೆ. ಕನಸಿನ ಲೋಕಕ್ಕೆ ಗಡೀಪಾರಾಗಿದ್ದ ನಾನು, ಅಲ್ಲಿಂದ ವಾಪಸ್ಸು ಬಂದು ಪೂರ್ಣ ಸತ್ಯಕ್ಕೆ ಒಡ್ಡಿಕೊಳ್ಳಲು ಪ್ರೇರಿತನಾಗಿದ್ದೆ.

ಹೀಗೆಂದುಕೊಂಡಾಗ, ನನಗೆ ಪ್ರಾಚೀನ ಭಾರತದ ಇನ್ನೋರ್ವ ಕವಿ, ಕಾಳಿದಾಸನ ನೆನಪಾಗುತ್ತದೆ. ಕಾಳಿದಾಸನ ಮೇಘದೂತದಲ್ಲಿ ಗಡೀಪಾರಾರಿನ ದುಃಖಮಯ ನಾದವು ಪ್ರತಿಧ್ವನಿಸುತ್ತದೆ.

ತವರಿನಿಂದಾಚೆಯ ಭೌತಿಕ ಸೀಮೆಗಳಲ್ಲಿ ಬದುಕುವುದರ ದುಃಖ ಈ ಕವಿಗಿರಲಿಲ್ಲ. ಇವನಿಗಿದ್ದದ್ದು ಅತ್ಯಂತ ಮೂಲಭೂತವಾದ ಆತ್ಮದಿಂದ ದೂರವಾಗಿರುವ ದುಃಖ. ಮಿತಿ ಮೀರಿದ ವೈಭವೋಪೇತ ವಸ್ತುಗಳು ತುಂಬಿದ್ದು, ಜಡ್ಡುಗಟ್ಟಿದ ಲೋಲುಪತೆ, ಅತಿಯಾದ ನಾಗರಿಕತೆಯಿಂದ ಕೂಡಿದ್ದ

ಅಂದಿನ ಕಾಲದ ರಾಜರುಗಳ ಅರಮನೆಗಳಲ್ಲಿನ ದಮನಕಾರಿ ವಾತಾವರಣವು, ಹೆಚ್ಚು ಕಡಿಮೆ ಈ ಕವಿಯ ಎಲ್ಲ ಕೃತಿಗಳಲ್ಲಿ ಕಂಡುಬರುತ್ತದೆ.

ಆಸ್ಥಾನ ಕವಿಯಾಗಿದ್ದ ಕಾಳಿದಾಸನು ಸಹ ಒಂದು ರೀತಿ ಬಹಿಷ್ಕಾರ ಅನುಭವಿಸುತ್ತಿದ್ದು- ಅನಂತದ ಸಾನ್ನಿಧ್ಯದಿಂದ ಬಹಿಷ್ಕಾರಗೊಂಡ ಸ್ಥಿತಿಯಲ್ಲಿದ್ದ. ಇದು ತನ್ನೊಬ್ಬನ ಬಹಿಷ್ಕಾರವಲ್ಲ ಎನ್ನುವುದು ಅವನಿಗೆ ತಿಳಿದಿತ್ತು. ತಾನು ಜನಿಸಿದ್ದ ಆ ಕಾಲದ ಇಡೀ ಜನಾಂಗವು ಧನೈಶ್ವರ್ಯಗಳನ್ನು ಸಂಗ್ರಹಿಸಿ, ತನ್ನ ಯೋಗಕ್ಷೇಮವನ್ನು ಕಳೆದುಕೊಂಡಿರುವುದು ಹಾಗೂ ಸರಕು ಸಾಮಗ್ರಿಗಳ ಉಗ್ರಾಣಗಳನ್ನು ಕಟ್ಟಿಸಿ, ಮಹಾನ್ ವಿಶ್ವದ ಹಿನ್ನೆಲೆಯನ್ನು ಮರೆತುಬಿಟ್ಟಿರುವುದರ ಅರಿವು ಅವನಿಗಿತ್ತು. ಕಾಳಿದಾಸನ ನಾಟಕ ಮತ್ತು ಕಾವ್ಯದಲ್ಲಿ ಅವನಲ್ಲಿ ಪರಿಪೂರ್ಣತೆಯ ಅಭಿಲಾಷೆ ಯಾವ ರೂಪದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ? ಪ್ರಾಚೀನ ಕಾಲದ ಕಾಡಿನಲ್ಲಿ ನೆಲೆಸಿದ್ದ ಪುರುಷಪ್ರಧಾನ ಸಮುದಾಯವಾದ ತಪೋವನವೇ ಆ ರೂಪ. ತಪೋವನ ವಾಸಿಗಳು ಅನಾಗರಿಕ ಸಂಸ್ಕೃತಿ ಮತ್ತು ಮನಸ್ಸಿನವರಲ್ಲ ಎನ್ನುವುದು ಸಂಸ್ಕೃತ ಸಾಹಿತ್ಯದ ಪರಿಚಯ ಇರುವವರಿಗೆ ತಿಳಿದಿದೆ. ಇವರು ಸತ್ಯ ಶೋಧನೆಯಲ್ಲಿ ತೊಡಗಿಕೊಂಡಿದ್ದರು. ಇದಕ್ಕಾಗಿ ಇವರು ನಿರ್ಮಲ ವಾತಾವಾರಣದಲ್ಲಿದ್ದರು, ಮಡಿವಂತಿಕೆಯ ವಾತಾವರಣದಲ್ಲಲ್ಲ. ಇವರ ಜೀವನ ಸರಳವಾಗಿತ್ತೇ ಹೊರತು, ಸ್ವ- ದೇಹ ದಂಡನೆ ಇರಲಿಲ್ಲ. ಬ್ರಹ್ಮಚರ್ಯ ಪಾಲಿಸಲೇಬೇಕೆಂದು ಇವರು ಹೇಳುತ್ತಿರಲಿಲ್ಲ ಮತ್ತು ಸದಾಕಾಲ ಪ್ರಾಪಂಚಿಕ ಆಸಕ್ತಿ ಇರುವ ಜನರೊಡನೆ ಆಂತರಿಕಸಂಪರ್ಕದಲ್ಲಿದ್ದರು.
ಇವರ ಜೀವನದ ಉದ್ದೇಶ ಮತ್ತು ಪ್ರಯತ್ನಗಳನ್ನು ಉಪನಿಷತ್ತಿನ ಈ ಸಾಲುಗಳಲ್ಲಿ ಸಂಕ್ಷಿಪ್ತವಾಗಿ ತಿಳಿಸಲಾಗಿದೆ:

ತೆ ಸರ್ವಗಮ್ ಸರ್ವತಃ ಪ್ರಾಪ್ಯ ಧೀರ
ಯುಕ್ತಾತ್ಮನಃ ಸರ್ವಮೇವವಿಶಂತಿ.

ಸರ್ವವ್ಯಾಪಿ ಚೇತನದೊಂದಿಗೆ ಎಲ್ಲ ಕಡೆಗಳಲ್ಲೂ ಸಮ್ಮಿಳಿತಗೊಂಡಿರುವುದರ ಅರಿವಿರುವ ನಿರ್ಮಲ ಮನಸ್ಸಿನ ವ್ಯಕ್ತಿಗಳು ಎಲ್ಲರಲ್ಲೂ ತೊಡಗುತ್ತಾರೆ.

ಇದೆಂದಿಗೂ ಋಣಾತ್ಮಕ ಸ್ವಭಾವದ ವೈರಾಗ್ಯದ ಸಿದ್ಧಾಂತವಾಗಿರಲಿಲ್ಲ. ಇದರಲ್ಲಿ ಪರಿಪೂರ್ಣ ಸಾಕ್ಷಾತ್ಕಾರದ ದರ್ಶನವಿತ್ತು. ಸಂಪತ್ತಿನಿಂದ ತುಂಬಿತುಳುಕುತ್ತಿದ್ದ ಉಜ್ಜಯಿನಿ ನಗರ ಮತ್ತು ವಿಕ್ರಮಾದಿತ್ಯನ ಭವ್ಯ ಆಳ್ವಿಕೆಯಲ್ಲಿ ನೆಲೆಸಿದ್ದು, ಪ್ರತಿಬಂಧಕ ವಸ್ತುಗಳಿಂದ ಮತ್ತು ಎಲ್ಲೆಲ್ಲೂ ಕಂಡುಬರುತ್ತಿದ್ದ ಸ್ವ-ವಿನಾಶಕಾರಿಗಳಿಂದ ಸಾಕಷ್ಟು ಒತ್ತಡಕ್ಕೀಡಾಗಿ, ಯಾತನೆಯನ್ನು ಅನುಭವಿಸುತ್ತಿದ್ದ ಕಾಳಿದಾಸನ ಮನಸ್ಸು ಸ್ಫೂರ್ತಿಯುತ ಜೀವನಕ್ಕಾಗಿ ತನ್ನ ಚಿಂತನೆಗಳನ್ನು ತಪೋವನದ ದರ್ಶನದ ಸುತ್ತ ಸುಳಿದಾಡುವಂತೆ ಮಾಡಿದ್ದಾದರೂ ಹೇಗೆ!ತ

ಆಧುನಿಕ ಭಾರತದ ಕವಿಯು ಅಂತರಾತ್ಮದಲ್ಲಿ ಆಧ್ಯಾತ್ಮದ ಬಹಿಷ್ಕಾರದ ನೋವನ್ನು ಅನುಭವಿಸಿದಾಗ ಅವನಿಗೂ ಈ ದರ್ಶನವಾದದ್ದು ಸಹಜ ಕಾಕತಾಳೀಯವೇ ಹೊರತು

ಉದ್ದೇಶಪೂರ್ವಕ ಅನುಕರಣೆಯಲ್ಲ. ಕಾಳಿದಾಸನ ಕಾಲದಲ್ಲಿ ಜನರಿಗೆ ಕಾಡಿನ ನೆಲಸುಜಾಗವಾದ (colony) ತಪೋವನದ ಆದರ್ಶದಲ್ಲಿ ಸ್ಪಷ್ಟವಾದ ನಂಬಿಕೆಯಿತ್ತು. ಹಿಂದಿನ ಕಾಲಮಾನದಲ್ಲೂ ಪ್ರಕೃತಿಯ ಮಧ್ಯೆ ಜೀವಿಸುವ ಜನ ಸಮುದಾಯಗಳಿದ್ದವು. ಅಲ್ಲಿ ವಾಸಿಸುತ್ತಿದ್ದವರು ಮುಂಬರುವ ಸಾವನ್ನು ತೀವ್ರವಾಗಿ ಹಂಬಲಿಸುತ್ತಿದ್ದಂತಹ ವೈರಾಗಿಗಳಲ್ಲ. ಅವರು ಪ್ರಶಾಂತ ಮನಸ್ಸಿನ ವಿವೇಕಿಗಳಾಗಿದ್ದು, ತಮ್ಮ ಜೀವನದ ಆಧ್ಯಾತ್ಮಿಕ ಅರ್ಥದ ಸಾಕ್ಷಾತ್ಕರವನ್ನು ಬಯಸುವವರಾಗಿದ್ದರು. ಹಾಗಾಗಿ, ಕಾಳಿದಾಸ ತಪೋವನದ ಬಗ್ಗೆ ಹಾಡಿದಾಗ, ತಕ್ಷಣವೇ ಅವನ ಕಾವ್ಯಕ್ಕೂ ಕೇಳುಗರ ಜೀವಂತ ನಂಬಿಕೆಗಳಿಗೂ ಸಂಪೂರ್ಣ ತಾಳಮೇಳವನ್ನು ಕಾಣಬಹುದಿತ್ತು. ಆದರೆ ಇಂದು, ಇದರ ಕಲ್ಪನೆಯು ಸತ್ಯದ ಯಾವುದೇ ನಿಖರ ರೂಪರೇಖೆಯನ್ನು ಕಳೆದುಕೊಂಡು, ದೂರದ ಯಾವುದೋ ದಂತಕತೆಯ ಭ್ರಮಾಲೋಕದಂತೆ ಭಾಸವಾಗುತ್ತದೆ. ಆಧುನಿಕ ಕಾವ್ಯದಲ್ಲಿನ ಸಂಸ್ಕೃತ ಪದವು ಬರೀ ಕಾವ್ಯಾತ್ಮಕವೆನಿಸುತ್ತದೆ ಮತ್ತು ಅದರ ಅರ್ಥವನ್ನು ಸಾಹಿತ್ಯಕ ಮಟ್ಟದಲ್ಲಿ ಅಂದಾಜುಮಾಡಲಾಗುತ್ತದೆ. ಹಾಗೆ ನೋಡಿದರೆ, ನಿರ್ಮಲ ಭಾವಯುಕ್ತ ವನವಾಸದ ಮೂಲ ಸ್ವರೂಪದ ಚೈತನ್ಯವು ಈ ಕಾಲಕ್ಕೆ ವಿಲಕ್ಷಣ ಕಾಲಾಭಾಸವೆನಿಸುತ್ತದೆ. ಆದ್ದರಿಂದ ಅದನ್ನು ನೈಜವಾಗಿಸಲು ಜೀವನದ ಆಧುನಿಕ ಪರಿಸ್ಥಿತಿಗಳಿಗೆ ಹೊಂದುವಂತೆ ಪುನರ್ಜನ್ಮ ಪಡೆದುಕೊಳ್ಳುವ ಅವಶ್ಯಕತೆ ಇದೆ. ಸತ್ಯವದೇ ಇರಬೇಕು, ಆದರೆ ವಾಸ್ತವಾಂಶಗಳು ಅದೇ ರೀತಿ ಇರಬೇಕಿಲ್ಲ. ಈ ಕಾರಣಗಳಿಂದಲೇ ಆಧುನಿಕ ಕವಿಗೆ ಮೂರ್ತ ಪದಗಳ ಭಾಷೆಯಲ್ಲಿ ಕವಿತೆಯನ್ನು ರಚಿಸಬೇಕೆನ್ನುವ ಹಂಬಲ ಹುಟ್ಟಿತು.

ಈಗ ನಾನು ಐತಿಹಾಸಿಕ ಸಂಗತಿಗಳನ್ನು ವಿವರವಾಗಿ ತಿಳಿಸಬೇಕು. ನಾಗರಿಕ ಮಾನವನು ತನ್ನ ಸಹಜ ಜೀವನ ಕಕ್ಷೆಯಿಂದ ಬಹಳ ದೂರ ಬಂದಿದ್ದಾನೆ. ಮಾನವನು ತನಗಾಗಿ ಜೇನುಗೂಡಿನಂತಹ ಪ್ರಪಂಚವನ್ನು ರಚಿಸಿಕೊಂಡು ಅದಕ್ಕೆ ಹೊಂದಿಕೊಳ್ಳಲು ಜೇನುನೊಣಗಳ ಕೆಲವು ಅಭ್ಯಾಸಗಳನ್ನು ಕ್ರಮೇಣ ರೂಢಿಸಿಕೊಂಡು ಅವನ್ನು ಘನೀಭೂತಗೊಳಿಸಿಕೊಂಡಿದ್ದಾನೆ. ಜನರು ಬೇಸತ್ತುಹೋಗಿ ಪ್ರಪಂಚದೆಡೆಗೆ ಬಳಲಿಕೆ ತೋರುವುದನ್ನು ಅನೇಕ ಸಲ ಗಮನಿಸುತ್ತೇವೆ. ಇವರಿಗೆ ವಿನಾಕಾರಣ ತಮ್ಮ ಪರಿಸ್ಥಿತಿಯ ವಿರುದ್ಧ ಬಂಡಾಯದ ಮನೋಭಾವವಿರುತ್ತದೆ. ಜೇನುಗೂಡಿನ-ಗೋಡೆಗಳ ಮಧ್ಯೆ ಸಿಲುಕಿ, ಎಲ್ಲರಿಂದ ದೂರ ಉಳಿದಾಗ ಜೀವನ ಕಲೆಗೆ ಅಗತ್ಯವಾದ ಸಮತೋಲನದ ದೃಷ್ಟಿಕೋನ ನಮಗೆ ದೊರಕುವುದಿಲ್ಲ. ಇಂತಹ ಗೋಡೆಗಳ ವ್ಯವಸ್ಥೆಯ ವಿರುದ್ಧ ಅವನ ಮನಸ್ಸಿನಲ್ಲಿ ಅತೃಪ್ತಿ ಹೊಗೆಯಾಡುತ್ತದೆ. ಆಗ ಅತ್ಮಘಾತಕ ಹಿಂಸೆಯ ಸಾಮಾಜಿಕ ಕ್ರಾಂತಿಗಳ ಆಗಮನವಾಗುತ್ತದೆ. ಇವೆಲ್ಲವುಗಳು ಸೂಚಿಸುವುದೇನೆಂದರೆ, ಜೇನುನೊಣದ ಮಾದರಿಯಂತೆ ಮಾನವನ ರಚನೆಯಾಗಿಲ್ಲ. ಹಾಗಾಗಿ, ಮಾನವನ ಸಾಮಾಜಿಕ ಸ್ವಾತಂತ್ರ್ಯವನ್ನು ಉದಾಸೀನ ಮಾಡಿದಾಗ, ಅವನು ಯಾವ ಲಕ್ಷ್ಯವೂ ಇಲ್ಲದ ಸಮಾಜ-ವಿರೋಧಿ ವ್ಯಕ್ತಿಯಾಗುತ್ತಾನೆ.

ಇಂದಿನ ಅತ್ಯಂತ ಸಂಕೀರ್ಣವಾದ ಆಧುನಿಕ ಪರಿಸ್ಥಿತಿಯಲ್ಲಿ, ಯಾಂತ್ರಿಕ ಬಲವನ್ನು ಬಹಳ ದಕ್ಷವಾಗಿ ಬಳಸಿಕೊಂಡು ಬಹಳ ವೇಗವಾಗಿ ವಸ್ತುಗಳನ್ನು ಉತ್ಪಾದಿಸಲಾಗುತ್ತದೆ. ಇವನ್ನು ಆಯ್ಕೆ ಮಾಡಿಕೊಂಡು, ಅರಿತುಕೊಂಡು, ತನ್ನ ಸ್ವಭಾವ ಮತ್ತು ಅಗತ್ಯಗಳಿಗನುಗುಣವಾಗಿ ಅದರೊಡನೆ

ಸಾಮರಸ್ಯ ಹೊಂದಲು ಅವನ್ನು ಸರಳಗೊಳಿಸಿಕೊಳ್ಳುವ ಸಾಮರ್ಥ್ಯ ಗಳಿಕೆಯ ಎಷ್ಟೋ ಪಟ್ಟು ಹೆಚ್ಚಿನ ವೇಗದಲ್ಲಿ ವಸ್ತುಗಳು ತಯಾರಾಗುತ್ತಿವೆ.

ಉಷ್ಣವಲಯದಲ್ಲಿ ಸಿಕ್ಕಾಪಟ್ಟೆ ಬೆಳೆದಿರುವ ಪೊದೆಗಳಂತೆ ವಸ್ತುಗಳ ಮಿತಿಮೀರಿದ ಉತ್ಪಾದನೆಯು ಮಾನವನನ್ನು ಬಂಧಿಸುತ್ತದೆ. ಹಕ್ಕಿಗೂಡು ಸರಳವಾಗಿರುತ್ತದೆ, ಅದಕ್ಕೆ ಆಕಾಶದೊಡನೆ ಮುಕ್ತ ಸಂಬಂಧವಿರುತ್ತದೆ. ಆದರೆ ಬೋನು ಸಂಕೀರ್ಣ ಮತ್ತು ದುಬಾರಿ; ಹೊರಗಿರುವುದೆಲ್ಲದರಿಂದ ಸಂಬಂಧವನ್ನು ಕಡೆದುಕೊಂಡಿರುತ್ತದೆ. ಮಾನವನು ವಸ್ತುಗಳ ಮೇಲೆ ಹೆಚ್ಚು ಅವಲಂಬಿತನಾಗಿ ಭೂತಾಕಾರದ ಬೋನನ್ನು ತನ್ನ ಸುತ್ತ ಕಟ್ಟಿಕೊಳ್ಳುತ್ತಿದ್ದಾನೆ. ಅದರೊಳಗಿನ ನಿರ್ಜೀವ ವಕ್ರತೆಗೆ ಹೊಂದಿಕೊಂಡು ಅದರ ಗಡಿಯೊಳಗೆ ಪರಿಮಿತನಾಗುವುದರಲ್ಲೇ ಸದಾ ಮಗ್ನನಾಗಿರುತ್ತಾನೆಲ್ಲದೆ, ಅದರ ಭಾಗವೇ ಆಗಿಹೋಗುತ್ತಿದ್ದಾನೆ.

ಮೇಲಿನ ಚಿಂತನೆಗೆ ವಿರುದ್ಧವಾದ ಚಿಂತನೆ ಒಂದು ವರ್ಗದ ಜನರಲ್ಲಿದೆ. ಅದೇನೆಂದರೆ, ವಸ್ತುಗಳ ಮೇಲಿರುವ ಅಸಹಜ ಬಯಕೆಯಿಂದ ಬದುಕಿನಲ್ಲಿ ನಿರಂತರವಾಗಿ ಹೆಚ್ಚಿನ ಒತ್ತಡಕ್ಕೊಳಗಾದಾಗ ನಾಗರಿಕತೆಯ ಅನಂತ ಪಯಣಕ್ಕೆ ಅಗತ್ಯವಾದ ಶಕ್ತಿ ಉತ್ಪನ್ನವಾಗುತ್ತದೆ ಎಂಬ ನಂಬಿಕೆ. ಆದರೆ, ಇತಿಹಾಸದಲ್ಲಿ ಯಾವುದೇ ಭವ್ಯ ನಾಗರಿಕತೆಯ ಶ್ರೇಷ್ಠತೆಗೆ ಈ ರೀತಿಯ ಚಿಂತನೆಯು ಚಾಲನಾ ಶಕ್ತಿಯಾಗಿರಲಿಲ್ಲ ಎನ್ನುವುದು ನನ್ನ ವೈಯಕ್ತಿಕ ನಂಬಿಕೆ.

ಬ್ರಿಟಿಷ್ ಇಂಡಿಯಾದ ಮಹಾನ್ ನಗರದಲ್ಲಿ ನಾನು ಹುಟ್ಟಿದೆ. ನನ್ನ ಪೂರ್ವಜರು ಈಸ್ಟ್ ಇಂಡಿಯಾ ಕಂಪನಿಯ ದೆಸೆಯಿಂದ ಬದಲಾಗುತ್ತಿದ್ದ ಅದೃಷ್ಟದ ಮೊದಲ ಅಲೆಯನ್ನು ಹಿಡಿದು ಕಲ್ಕತ್ತಾಗೆ ಬಂದಿದ್ದರು. ಸಂಪ್ರದಾಯಕ್ಕೆ ಕಟ್ಟು ಬೀಳದ ನಮ್ಮ ಮನೆಯಲ್ಲಿ ಹಿಂದು, ಮುಸ್ಲಿಂ ಮತ್ತು ಬ್ರಿಟಿಷ್ ಸಂಸ್ಕೃತಿಗಳ ಸಮಾಗಮವಿತ್ತು. ವಿಕ್ಟೋರಿಯನ್ ನಡಾವಳಿಗಳಲ್ಲಿ ಮಿತವ್ಯದ ನಿಟ್ಟಿನಲ್ಲಿ ಅನುಸರಿಸುವ ಸಮಯ, ಸಮಾರಂಭಗಳು ಮತ್ತು ವ್ಯಕ್ತಿಗತ ಚರ್ಯೆಯ ಗಾಂಭೀರ್ಯಗಳತ್ತ ನಾವೂ ಸಹ ದೌಡಾಯಿಸುತ್ತ, ದಿರಿಸು, ಸೌಜನ್ಯ ಹಾಗೂ ಯಥೇಚ್ಛ ವಿರಾಮಗಳ ವ್ಯಾಪ್ತಿಯು ನಮ್ಮಲ್ಲೂ ಕ್ರಮೇಣ ಕಡಿತಗೊಂಡ ಕಾಲಮಾನಕ್ಕೆ ಸೇರಿದವರಾಗಿದ್ದರು ನಮ್ಮ ತಾತ. ನಾನು ಹುಟ್ಟುವ ವೇಳೆಗಾಗಲೇ ನನ್ನ ಪೂರ್ವಿಕರ ಗತಕಾಲದ ಹಳ್ಳಿಯ ಸಮುದಾಯದ ಜೀವನಶೈಲಿಯ ಹುಲ್ಲುಹಾಸಿನ ಮೇಲೆ ಮಹಾನಗರದ ಅಭಿವೃದ್ಧಿ ಪಥದ ಗಾಡಿ ಉತ್ಸಾಹದಿಂದ ತನ್ನ ಚಲನೆಯನ್ನು ಪ್ರಾರಂಭಿಸಿತ್ತು. ನನ್ನ ಸುತ್ತಮುತ್ತ ಈ ತುಳಿದಾಟ ಹೆಚ್ಚು ಕಡಿಮೆ ಸಂಪೂರ್ಣವಾಗಿದ್ದರೂ ಸಹ ಅಲ್ಪಸ್ವಲ್ಪ ಉಳಿದಿದ್ದ ಭಗ್ನಾವಶೇಷಗಳಿಂದ ಹಳೆಯ ಕಾಲದ ನೋವಿನ ಧ್ವನಿ ಕೇಳಿಸುತ್ತಲೇ ಇತ್ತು.

ಹಳೆಯಕಾಲದ ಸಹಜ ಅಂತಃಕರಣ, ಮುಗ್ಧ ನಂಬಿಕೆ ಮತ್ತು ಕಾವ್ಯಮಯ ಜೀವನಾಚರಣೆಗಳು, ಆದರಾಥಿತ್ಯಗಳಿಂದ ತುಂಬಿದ್ದ ಸವಿಯಾದ ಸಮಾಜವನ್ನು ವಿಷಾದದಿಂದ ನನ್ನಣ್ಣ ವಿವರಿಸುತ್ತಿದ್ದನ್ನು ನಾನು ಅನೇಕ ಸಲ ಕೇಳಿಸಿಕೊಂಡಿದ್ದೆ. ಆದರೆ ಸುವರ್ಣಮಯ ಮುಸ್ಸಂಜೆಯ ಕ್ಷಿತಿಜದ ಮಬ್ಬಿನಲ್ಲಿ, ಈ ಜೀವನ ನನ್ನ ಹಿಂದೆ ನೆರಳಿನಂತೆ ಕರಗಿಹೋಗುತ್ತಿತ್ತು. ನನ್ನ ಬಾಲ್ಯದಲ್ಲಿ ಸುತ್ತಮುತ್ತ ಇದ್ದದ್ದು ಪಾಶ್ಚಿಮಾತ್ಯ ವರ್ತಕರ ಕಂಪನಿ ಹೊಸದಾಗಿ ಕಟ್ಟಿದ್ದ ಆಧುನಿಕ ನಗರ.

ನಮಗೆ ಅಪರಿಚಿತವೆನಿಸಿದ್ದ ಅದರ ಆಧುನಿಕ ಜೀವನ ಚೈತನ್ಯವು ನಮ್ಮ ಜೀವನದೊಳಗೆ - ಅಗಣಿತ ಅಸಂಬದ್ಧತೆಗಳ ನಡುವೆಯೂ - ಪ್ರವೇಶಿಸಲು ಹವಣಿಸುತ್ತಿತ್ತು.

ನಗರದ ಈ ರೀತಿಯ ಮುಕ್ತವಲ್ಲದ ನಿಷ್ಠುರ ಪ್ರಪಂಚ ಮಾತ್ರ ನನ್ನ ಅನುಭವಕ್ಕೆ ಬಂದಿದ್ದರೂ, ಗಡೀಪಾರಾದವನೊಬ್ಬ ತನ್ನ ಊರಿಗೆ ಹಂಬಲಿಸುವ ರೀತಿಯಲ್ಲಿ ನನ್ನ ಮನಸ್ಸು ಸಂಚರಿಸುತ್ತಿದ್ದದ್ದು ನನಗೆ ಆಶ್ಚರ್ಯವೆನಿಸಿದೆ. ಕಾಡಿನ ದಟ್ಟ ಪಿಸುನುಡಿ, ನೀರಿನ ಹರಿವು,, ಕಲ್ಲುಗಳ ನಿಶ್ಶಬ್ದ ರಹಸ್ಯಗಳು ರೂಪಿಸಿದ್ದ ನಮ್ಮ ಪೂರ್ವಿಕರ ಮನಸ್ಸಿನ ಧ್ವನಿಯೊಂದು ನನ್ನ ಅಂತಸ್ಸತ್ತ್ವವನ್ನು ನಿರಂತರವಾಗಿ ಉತ್ತೇಜಿಸುತ್ತಾ, ಆದಿಮ ನಿವಾಸದ ನೆನಪು ನನ್ನ ಸುಪ್ತ ಪ್ರಜ್ಞೆಯಲ್ಲಿರುವಂತೆ ಮಾಡಿತ್ತೆಂದು ತೋರುತ್ತದೆ. ನನ್ನೊಳಗೆ ಭೂತದಂತೆ ಕಾಡುವ ಜೀವಂತ ನೆನಪಿತ್ತು. ಆ ನೆನಪು, ಜನನ ಪೂರ್ವದ ತೊಟ್ಟಿಲು ಹಾಗೂ ನೆಲ ಜಲ ಗಾಳಿಯ ಅಪರಿಮಿತ ವಿಸ್ಮಯವನ್ನೊಳಗೊಂಡ ಪ್ರಾಚೀನ ಬದುಕಿನ ಕಾರ್ಯಕ್ಷೇತ್ರಕ್ಕಾಗಿ ಕಾತರಿಸುತ್ತಿರುವಂತೆ ನನಗೆ ತೋರುತ್ತಿತ್ತು. ಭಾರತ ದೇಶದ ಸ್ತಬ್ಧ ಮಧ್ಯಾಹ್ನದ ಸುಡುಬಿಸಿಲಿನ ವೇಳೆ, ಮೇಲೆ ತೇಲುತ್ತಿರುವ ಗಾಳಿಪಟದ ತೆಳುವಾದ ಕೀರಲು ದನಿಯೊಂದು ಒಂಟಿ ಹುಡುಗನಿಗೆ ದೂರದ ಮೂಕ ಸಂಬಂಧದ ಸಂದೇಶವನ್ನು ತಲುಪಿಸಿತ್ತು. ನಮ್ಮ ಮನೆಯ ಅಂಚಿನ ಗೋಡೆಯ ಬಳಿ ಕೆಲವು ತೆಂಗಿನಮರಗಳಿದ್ದವು. ಅವು ಈ ಭೂಮಿಯ ಆಕ್ರಮಣಕ್ಕೆ ಬಂದ ಹಿರಿಯ ಸೇನೆಯ ಯುದ್ಧ ಕೈದಿಗಳಂತೆ ನನಗೆ ತೋರುತ್ತಿತ್ತು. ಮರಗಳ ಮಹಾನ್ ಭ್ರಾತೃತ್ವವು ಮಾನವನಿಗೆ ಚಿರಂತನವಾಗಿ ಕರುಣಿಸಿರುವ ನಿರಂತರ ಸಖ್ಯದ ಕುರಿತು ಅವು ನನ್ನೊಡನೆ ಸಂಭಾಷಿಸುತ್ತಿದ್ದವು.

ಬಾಲ್ಯದ ಅಂದಿನ ದಿನಗಳನ್ನು ಹಿಂದಿರುಗಿ ನೋಡಿದಾಗ, ನನ್ನ ಮನಸ್ಸು ಆಕಾಶದ ಬೆಳಕಿನ ಅನಂತತೆಯಲ್ಲಿ ಸಂಪೂರ್ಣವಾಗಿ ತೇಲಾಡುತ್ತಿದ್ದ ಮತ್ತು ಕಂದು ನೆಲದ ಮೇಲೆ ಮಿನುಗುತ್ತಿದ್ದ ಹುಲ್ಲನ್ನು ಮೃದುವಾಗಿ ನೇವರಿಸಿ ರೋಮಾಂಚಿತನಾಗುತ್ತಿದ್ದ ನೆನಪು ಮೂಡುತ್ತದೆ. ನನ್ನ ಭಾರತೀಯ ವಂಶವು, ಎಲ್ಲದರೊಡನೆಯ ಸಾಮರಸ್ಯದ ಮೂಲಕ ಸಾರ್ಥಕತೆಯನ್ನು ಕಾಣುವ ಅದರ ತಾತ್ತ್ವಿಕತೆಯ ಪರಂಪರೆಯನ್ನು ನನ್ನೊಳಗೆ ಆಳವಾಗಿ ಮೂಡಿಸಿದೆ ಎನ್ನುವ ನನ್ನ ನಂಬಿಕೆಯನ್ನು ಈ ನೆನಪುಗಳು ದೃಢಪಡಿಸುತ್ತವೆ. ಈ ಜನ್ಮದ ದಿಗಂತದ ಮುಂಚಿನಿಂದಲೂ ಇರುವ ನನ್ನ ಚೇತನ ಬಿಡುಗಡೆ ಹೊಂದಬೇಕೆನ್ನುವ ಹಂಬಲದ ನೆನಪಿನ ಆಳದಲ್ಲಿ ಈ ಶಾಲಾ ಸ್ಥಾಪನೆಯ ಆಶಯದ ಮೂಲ ಸೆಲೆ ಇದೆ.

ಸ್ವಾತಂತ್ರ್ಯವೆಂದರೆ ಬರೀ ಅನಧೀನತೆ ಎಂದರೆ ಅದರಲ್ಲಿ ಹುರುಳಿಲ್ಲ. ಹಾಗಾಗಿ, ಅರ್ಥವೂ ಇಲ್ಲ. ಸಂಬಂಧಗಳ ಪರಿಪೂರ್ಣ ಸಾಮರಸ್ಯದಲ್ಲಿಯೇ ನಿರ್ದುಷ್ಟ ( perfect) ಸ್ವಾತಂತ್ರ್ಯವಡಗಿರುತ್ತದೆ. ಪ್ರಪಂಚದಲ್ಲಿ ಇರುವಿಕೆಯ ಮೂಲಕ ಮಾತ್ರ ಸಂಬಂಧಗಳ ಪರಿಪೂರ್ಣ ಸಾಮರಸ್ಯವನ್ನು ಸಾಧಿಸಲು ಸಾಧ್ಯವಾಗುತ್ತದೆಯೇ ಹೊರತು ಪ್ರಪಂಚವನ್ನು *ಅರಿತು* ಅದಕ್ಕೆ ಪ್ರತಿಕ್ರಿಯಿಸುವುದರ ಮೂಲಕವಲ್ಲ. ಜ್ಞಾನದ ವಸ್ತುವಿಷಯಗಳು ಜ್ಞಾನ ಅರಸುವವರನ್ನು ಅಮಿತ ದೂರದಲ್ಲಿಡುತ್ತದೆ. ಏಕೆಂದರೆ ಜ್ಞಾನವು ಸಂಯೋಗವಲ್ಲ(union). ಹಾಗಾಗಿ, ಬಿಡುಗಡೆಯ ಇನ್ನೊಂದು ಪ್ರಪಂಚವು ನಾವು ಸತ್ಯವನ್ನು ತಲುಪುವಲ್ಲಿ ನಮಗಾಗಿ ಕಾಯುತ್ತಿದೆ.

ಇಂದ್ರಿಯಗಳಿಂದ ಅನುಭವಿಸಿ ಅಥವಾ ನಮ್ಮ ತರ್ಕದ ಮೂಲಕ ಅಲ್ಲಿ ತಲುಪಲು ಸಾಧ್ಯವಿಲ್ಲ, ಪರಿಪೂರ್ಣವಾದ ಸಹಾನುಭೂತಿಯ ಸಂಯೋಗದಿಂದ ಮಾತ್ರ ಅದು ಸಾಧ್ಯ.

ಮಕ್ಕಳ ಇಂದ್ರಿಯಗಳಲ್ಲಿ ತಾಜಾ ಚೈತನ್ಯವಿರುತ್ತದೆ. ಇದರ ಮೂಲಕ ಅವರು ಪ್ರಪಂಚದ ಆಪ್ತತೆಯಲ್ಲಿ ನೇರವಾಗಿ ತೊಡಗಿಕೊಳ್ಳುತ್ತಾರೆ. ಇದು ಅವರಿಗೆ ದೊರಕಿರುವ ಮೊದಲ ಮಹತ್ತರ ಕೊಡುಗೆ. ಅವರು ಇದನ್ನು ನೇರ ಮತ್ತು ಸರಳವಾಗಿ ಸ್ವೀಕರಿಸುತ್ತಿರಬೇಕು ಹಾಗೂ ಪ್ರಪಂಚದ ನೇರ ಸಂಪರ್ಕವನ್ನು ಎಂದಿಗೂ ಕಳೆದುಕೊಳ್ಳಬಾರದು. ಪರಿಪೂರ್ಣತೆಯ ಸಲುವಾಗಿ ನಾವು ಉಳಿವಿನ (vital) ವಿಷಯದಲ್ಲಿ ಕಾಡುಮನುಷ್ಯನಂತಿದ್ದು, (savage) ಮಾನಸಿಕವಾಗಿ ನಾಗರಿಕರಾಗಬೇಕು. ಪಕೃತಿಯೊಡನೆ ಸಹಜವಾಗಿದ್ದು, ಮಾನವರೊಡನೆ ಮಾನವೀಯತೆ ತೋರಿಸುವ ಶಕ್ತಿ ನಮ್ಮಲ್ಲಿರಬೇಕು. ನಗರ ಜೀವನದ ನಾಗರಿಕತೆಯ ಏಕಾಂತಕ್ಕೆ ತಳ್ಳಲಾಗಿದ್ದ ನನ್ನಾತ್ಮ ತನ್ನ ಗ್ರಹಿಕೆಯ ಕ್ಷಿತಿಜದ ವಿಸ್ತಾರಕ್ಕಾಗಿ ರೋದಿಸುತ್ತಿತ್ತು. ಒಂದು ಪದ್ಯದಿಂದ ಕಿತ್ತು ಹಾಕಿದ ಪಂಕ್ತಿಯಂತೆ ನನ್ನ ಜೀವನವು ಅನಿಶ್ಚಿತತೆಯಿಂದ ಕೂಡಿತ್ತು. ಇದನ್ನು ಪೂರ್ಣಗೊಳಿಸಲು ಅಗತ್ಯವಾದ ಇನ್ನೊಂದು ಪ್ರಾಸಬದ್ಧ ಪಂಕ್ತಿಯು ಗ್ರಹಿಸಲಾರದಷ್ಟು ದೂರದಲ್ಲಿ ಮಬ್ಬಿನಲ್ಲಿ ಚಿತ್ತಾಗಿಹೋಗಿತ್ತು. ಏಕತಾನವಾದ ಯಾಂತ್ರಿಕ ಅಭ್ಯಾಸಗಳು ಮತ್ತು ಗೌರವಾರ್ಹತೆಯ ಸಾಂಪ್ರದಾಯಿಕ ಸಂಹಿತೆಗಳನ್ನೊಳಗೊಂಡ ಇಟ್ಟಿಗೆ ಮತ್ತು ಗಾರೆಗಳ ವ್ಯವಸ್ಥೆಯೊಂದಿಗಿನ ಸಂಘರ್ಷದಿಂದಾಗಿ, ಇತರ ಮಕ್ಕಳೊಂದಿಗೆ ಪುಡಿಗಾಸಿನ ಖರ್ಚೂ ಇಲ್ಲದೆ ಸಹಜವಾಗಿ ದೊರಕಬಹುದಾಗಿದ್ದ ಆನಂದ ನನ್ನಿಂದ ದೂರವಾಗಿತ್ತು.

ಎಲ್ಲರಂತೆಯೇ ನನ್ನನ್ನೂ ಶಾಲೆಗೆ ಕಳುಹಿಸಲಾಗಿತ್ತು. ಆದರೆ ಇತರ ಬಹುತೇಕ ಮಕ್ಕಳಿಗಿಂತ ನನ್ನ ಸಂಕಟ ಹೆಚ್ಚಾಗಿತ್ತು. ನನ್ನೊಳಗಿದ್ದ ಅಸಂಸ್ಕೃತ (non-civilized) ವ್ಯಕ್ತಿ ಸಂವೇದನಾಶೀಲನಾಗಿದ್ದ; ಅವನಿಗೆ ಬಣ್ಣ, ಸಂಗೀತ ಮತ್ತು ಜೀವನದ ಚಲನೆಯ ದಾಹ ಅತ್ಯಧಿಕವಾಗಿತ್ತು. ನಗರದಲ್ಲಿ ರೂಪುಗೊಂಡಿದ್ದ ಶಿಕ್ಷಣ ಈ ಜೀವಂತಿಕೆಯನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಮಾರಾಟಯೋಗ್ಯ ಫಲಿತಾಂಶವುಳ್ಳ ಹೆಸರಾಂತ ಮೂಟೆಗಳಿಗಾಗಿ ಕಾಯುತ್ತಿರುವ ಸರಕಿನ ಗಾಡಿಗಳನ್ನು ಅದು ಹೊಂದಿತ್ತು. ಮಾನವನಲ್ಲಿರುವ ಅನಾಗರಿಕತೆ ಮತ್ತು ನಾಗರಿಕತೆಯ ಅನುಪಾತದ ಪ್ರಮಾಣ ಭೂಮಿಯ ಮೇಲಿನ ನೀರು ಮತ್ತು ನೆಲದ ಅನುಪಾತದ ಪ್ರಮಾಣದಲ್ಲಿರಬೇಕು. ಅಂದರೆ, ಮೊದಲನೆಯದಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇರಬೇಕು. ಆದರೆ ನಾಗರಿಕತೆಯ ನಿರಂತರ ಸುಧಾರಣೆ ಶಾಲೆಯ ಉದ್ದೇಶವಾಗಿರುತ್ತದೆ. ದ್ರುವವನ್ನೆಲ್ಲ ಹೊರಹಾಕಿ ಶುಷ್ಕರನ್ನಾಗಿ ಮಾಡುವುದು ಶೋಚನಿಯವೆನ್ನುವ ಭಾವನೆ ನಗರಗಳಲ್ಲಿ ಕಂಡುಬರಲಿಲ್ಲ. ಅದರೆ ನನ್ನ ಸ್ವಭಾವ ಈ ಪರಿಸ್ಥಿತಿಗಳಿಗೆ ಹೊಂದಿಕೊಳ್ಳಲೇ ಇಲ್ಲ. ಹಾದಿಬದಿಯ ನಿರ್ದಯ ಶಿಷ್ಟಾಚಾರ ನನಗೆ ಒಗ್ಗಲೇ ಇಲ್ಲ. ನನ್ನೊಳಗಿನ ಅಸಂಸ್ಕೃತತ್ವ ಬಹಳ ಬೇಗ ಜಯ ಸಾಧಿಸಿತು. ನಾನು ಹದಿಹರೆಯವನ್ನು ಪ್ರವೇಶಿಸುತ್ತಿದ್ದಂತೆಯೇ ಶಾಲೆಯಿಂದ ಆಚೆ ಬಂದೆ. ಅಜ್ಞಾನದ ದ್ವೀಪದಲ್ಲಿ ಒಂಟಿಯಾಗಿ ನಿಂತ ನಾನು, ಆದಿಯಿಂದಲೇ ಪ್ರಾರಂಭಗೊಳ್ಳಬೇಕಿದ್ದ ನನ್ನ ಶಿಕ್ಷಣಕ್ಕಾಗಿ ನನ್ನದೇ ಸಹಜ ಪ್ರವೃತ್ತಿಯನ್ನು ಅವಲಂಬಿಸಬೇಕಾಗಿ ಬಂತು.

ಅದೃಷ್ಟವಶಾತ್ ರಾಬಿನ್ಸನ್ ಕ್ರೂಸೋವಿನ ಬಂಗಾಲೀ ಅನುವಾದ ಸಣ್ಣವನಿದ್ದಾಗ ನನಗೆ ದೊರಕಿದ್ದನ್ನು ಇದು ನೆನಪಿಸುತ್ತದೆ. ಹುಡುಗರಿಗೆ ಇದು ಅತ್ಯಂತ ಒಳ್ಳೆಯ ಪುಸ್ತಕವೆನ್ನುವ ನಂಬಿಕೆ ನನ್ನಲ್ಲಿ ಇಂದಿಗೂ ಬಲವಾಗಿದೆ. ಚಿಕ್ಕಂದಿನಿಂದ ನನ್ನಿಂದ ನಾನು ಬಿಡುಗಡೆ ಹೊಂದಿ ಪ್ರಕೃತಿಯಲ್ಲಿನ ಎಲ್ಲವುಗಳ ಜೊತೆಗೂಡಬೇಕೆನ್ನುವ ಹಂಬಲ ನನ್ನಲ್ಲಿ ಬಲವಾಗಿತ್ತು. ಇದು, ಚಿತ್ತವೃತ್ತಿಯು ಪ್ರಜ್ಞೆಯ ವಿಕಾಸವನ್ನು ಬಯಸುವ ಸಾಂಪ್ರದಾಯಿಕ ಭಾರತೀಯ ಮನೋಧರ್ಮವೆನ್ನಿಸುತ್ತದೆ. ಈ ಬಯಕೆಯು ವ್ಯಕ್ತಿಗತವಾದದ್ದು ಎನ್ನುವುದರಲ್ಲಿ ಸಹಮತವಿದ್ದರೂ ಸಹ ನಾವು ಸಹಿಸಿಕೊಳ್ಳಬೇಕಾದ ನಮ್ಮ ಭೌಗೋಳಿಕ ಪರಿಸರದಲ್ಲಿ ಇದು ಅನಿವಾರ್ಯವೂ ಹೌದು. ಉಷ್ಣವಲಯದ ಅತಿಶಯವಾದ ನಿರಂಕುಶ ಪ್ರಭುತ್ವದಡಿ ನಮ್ಮ ಜೀವನ ಸಾಗುತ್ತದೆ. ನಮ್ಮ ಅಸ್ತಿತ್ವದ ಹಕ್ಕಿನ ಪ್ರತಿಕ್ಷಣಕ್ಕೂ ದೊಡ್ಡ ಬೆಲೆಯನ್ನು ತೆರುತ್ತೇವೆ. ಅತಿಯಾದ ಸೆಖೆ, ತೇವ; ಪದಗಳಲ್ಲಿ ವಿವರಿಸಲಾಗದ ಅತಿಸೂಕ್ಷ್ಮ ಜೀವಿಗಳು ದೊಡ್ಡ ಜೀವಿಗಳನ್ನು ನುಂಗಿಹಾಕುವ ಫಲವತ್ತತೆ; ಕಾಣುವ, ಕಾಣದ ಆದರೆ ನಿರಂತರವಾಗಿ ತ್ರಾಸ ನೀಡುವ ಸಂಗತಿಗಳು ಮಹತ್ತರ ಸಂಶೋಧನೆಗಳನ್ನು ಕೈಗೆತ್ತಿಕೊಳ್ಳುವ ಸಾಹಸಕ್ಕೆ ಕಡಿವಾಣ ಹಾಕುತ್ತವೆ. ಹೆಚ್ಚುವರಿ ಶಕ್ತಿಯು ಸ್ವ-ಅರಿವಿಗೆ ಇರುವ ಅಡೆತಡೆಗಳನ್ನು ಕಂಡುಕೊಳ್ಳಲು ವ್ಯಯವಾಗುತ್ತದೆ. ಪ್ರಕೃತಿಯ ಹಾನಿಕರ ಸ್ವಭಾವಕ್ಕೆ ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಪದೇ ಪದೇ ಮಹತ್ವ ನೀಡುವುದನ್ನು ನಾವು ಕಾಣುತ್ತೇವೆ. ಪಾಶ್ಚಾತ್ಯರು ಪ್ರಕೃತಿಯಲ್ಲಿ ಶತೃವನ್ನು ಕಂಡು ಅದರೊಂದಿಗೆ ಯುದ್ಧಕ್ಕೆ ಸವಾಲೆಸೆದು ಸಂತೋಷಪಡುತ್ತಾರೆ. ಅಲೆಗ್ಸಾಂಡರ್ ತಾನು ಪ್ರಪಂಚವನ್ನೆಲ್ಲ ಗೆದ್ದ ನಂತರ ಇನ್ನೂ ಕೆಲವು ದೇಶಗಳನ್ನು ಹುಡುಕಿ ಅವನ್ನು ಜಯಿಸುವ ಆಸೆಯನ್ನು ವ್ಯಕ್ತಪಡಿಸಿದ್ದ. ಇದೇ ಕಾರಣದಿಂದಲೇ ಅತ್ಯಂತ ಜೀವಂತಿಕೆಯುಳ್ಳ ಪಾಶ್ಚಿಮಾತ್ಯರು ತಮಗೆ ಹಾನಿಕಾರಕವಾದ ವಸ್ತುಗಳ ವಿರುದ್ಧ ಹೋರಾಡುವ ಮಹೋನ್ನತ ಧ್ಯೇಯದಲ್ಲಿ ಸ್ವಲ್ಪ ಕಾಲಾವಕಾಶ ದೊರೆತಾಗ ಇತರರ ವ್ಯವಹಾರಗಳಲ್ಲಿ ಮೂಗು ತೂರಿಸುವುದಕ್ಕೆ ಕಾತುರರಾಗಿರುತ್ತಾರೆ. ಇದನ್ನು ಯಾರಾದರೂ ತಡೆದರೆ ಅದಕ್ಕೆ ಪರಿಹಾರವನ್ನೂ ಅಪೇಕ್ಷಿಸುತ್ತಾರೆ. ತಮ್ಮನ್ನು ತಾವೇ ಗಂಡಾಂತರದಲ್ಲಿ ಸಿಕ್ಕಿಸಿಕೊಂಡು ಪುಳಕಗೊಳ್ಳಲು ಅನೇಕ ತೊಂದರೆಗಳನ್ನು ಸ್ವಾಗತಿಸಿ ಕೆಡುಕನ್ನುಂಟುಮಾಡದ ಇತರರರಿಗೆ ತೊಂದರೆ ನೀಡುತ್ತಾರೆ. ಇದಕ್ಕಾಗಿ ಇವರು ಯಾರ ತಂಟೆಗೂ ಹೋಗದೆ ತಮ್ಮ ಪಾಡಿಗೆ ತಾವಿರುವ ಜೀವಿಗಳನ್ನು ಬಲಿ ತೆಗೆದುಕೊಳ್ಳುವ ಉದಾಹರಣೆಯನ್ನು ಗಮನಿಸಬಹುದು. ಹೇಗೆ ಹಾರಿಹೋಗಬೇಕೆಂಬುದನ್ನು ತಿಳಿದಿರುವ ಸುಂದರ ಪಕ್ಷಿಗಳು, ಪ್ರವೇಶಿಸಲು ಅಸಾಧ್ಯವಾದ ತಾಣಗಳಲ್ಲಿ ವಾಸಿಸಬಲ್ಲ ಪುಕ್ಕಲು ಪ್ರಾಣಿಗಳು ಇವೇ ಆ ಬಲಿಪಶುಗಳು. ಇನ್ನೂ ಮೇಲ್ಜಾತಿಯ ಜೀವಿಗಳ ಬಲಿ ತೆಗೆದುಕೊಳ್ಳುವುದನ್ನು ಸೌಜನ್ಯದ ಕಾರಣಕ್ಕಾಗಿ ಉಲ್ಲೇಖಿಸುವುದಿಲ್ಲ.

ಜೀವನದಲ್ಲಿ ಪರಿಪೂರ್ಣರಾಗುವ ಪಥದಲ್ಲಿ ನಿರಂತರವಾಗಿ ದ್ವಂದ್ವಗಳನ್ನು ಎದುರಿಸಬೇಕಾಗುತ್ತದೆ. ಪರಿಪೂರ್ಣತೆಯ ಪಥದಲ್ಲಿ ಮುಂದೆ ಸಾಗಲು ಇದು ಅತ್ಯಗತ್ಯ. ನೀರಿನ ಹೊನಲು, ತಾನು ದಾರಿಮಾಡಿಕೊಂಡು ಸಾಗಬೇಕಾದ ಮಣ್ಣಿನ ನಿರಂತರ ವಿರೋಧದಿಂದಾಗಿ ತನ್ನ ಹರಿವಿನ ಆಲಸ್ಯದಿಂದ ರಕ್ಷಿಸಲ್ಪಡುತ್ತದೆ. ಈ ಮಣ್ಣೇ ನೀರಿನ ದಡಗಳನ್ನು ರೂಪಿಸುತ್ತದೆ. 'ಜೀವನ'ವೆನ್ನುವ ಅದ್ಭುತದಿಂದಲೇ ಅದರೊಡನೆ ಸೆಣೆಸಾಡುವ ಚೈತನ್ಯ ಹುಟ್ಟುವುದು. ಸಂಗೀತಗಾರರು ವಾದ್ಯ ಶ್ರುತಿ ಮಾಡುವುದು, ಕಷ್ಟವಾದ ಕಾರ್ಯದಲ್ಲಿ ತೊಡಗಿಕೊಳ್ಳುವ

ಪ್ರಾಮೀಣ್ಯತೆಯ ನಿರಂತರ ಪರಿಶ್ರಮವು ವ್ಯಕ್ತವಾಗುತ್ತದೆಂದಲ್ಲ. ಸಂಗೀತವನ್ನು ಪರಿಪೂರ್ಣವಾಗಿ ಅರ್ಥೈಸಿಕೊಳ್ಳಲು ಸಹಾಯವಾಗುತ್ತದೆಂದು. ಪಾಶ್ಚಿಮಾತ್ಯರು, ಅಡೆತಡೆಗಳನ್ನು ಎದುರಿಸುವ ತೀವ್ರ ಪ್ರಯತ್ನದಲ್ಲಿನ ಪ್ರಫುಲ್ಲಿತ ಆನಂದವನ್ನು ಅನುಭವಿಸುವ ಸಲುವಾಗಿ ಜೀವನವಾದ್ಯದ ಎಲ್ಲ ತಂತಿಗಳನ್ನು ಶೃತಿ ಮಾಡಿದ್ದಾರೆ. ಇದನ್ನು ನಾವು ಸಂಭ್ರಮಿಸಬೇಕು. ಆದರೆ, ಜಗತ್ತಿನ ಸೃಷ್ಟಿ ಚೇತನವು ತನ್ನ ಒಳಿತಿಗೆಂತಲೇ ಎಲ್ಲ ಅಡೆತಡೆಗಳನ್ನು ಸಂಪೂರ್ಣವಾಗಿ ನಿವಾರಣೆಯಾಗಗೊಡುವುದಿಲ್ಲ. ಏಕೆಂದರೆ, ಪರಿಪೂರ್ಣತೆಯ ಆದರ್ಶದಲ್ಲಿ ಸಕಾರಾತ್ಮಕ ಸತ್ಯವಿದೆ. ಅದನ್ನು ನಮ್ಮ ತೀವ್ರ ಪ್ರಯತ್ನಗಳ ಮೂಲಕ ನಮ್ಮದಾಗಿಸಿಕೊಳ್ಳಬೇಕಾಗುತ್ತದೆ ಹಾಗೂ ಈ ಹೋರಾಟದ ಆಕಾಂಕ್ಷೆ ಬಹಳ ಒಳ್ಳೆಯದು. ಆದರೆ ಹಾಗೆಂದು ನಮ್ಮ ದೇಹದಾರ್ಢ್ಯವನ್ನು ಪ್ರದರ್ಶಿಸುವ ಅಥವಾ ಒರಟಾಗಿ ಹೊಟ್ಟೆಬಾಕತನದಿಂದ ಸುಲಿಗೆ ಮಾಡುವಂಥ ಅನಾಗರಿಕತನ ಒಳ್ಳೆಯದಲ್ಲ.

ರಾಬಿನ್ಸನ್ ಕ್ರೂಸೋ ಕತೆಯಲ್ಲಿ ಪ್ರಕೃತಿಯೊಡನೆ ಒಂದಾದಾಗ ಅನುಭವಕ್ಕೆ ಬರುವ ಮಹದಾನಂದ ಅಭಿವ್ಯಕ್ತಗೊಂಡಿದೆ. ವ್ಯಕ್ತಿ ಒಬ್ಬಂಟಿಯಾಗಿ ಜಗದೈಕಮಾತ್ರಳಾದ ಪ್ರಕೃತಿ ಮಾತೆಯೊಂದಿಗೆ ಮುಖಾಮುಖಿಯಾಗಿ ಅವಳನ್ನು ಒಲಿಸಿಕೊಳ್ಳಲು, ಅವಳೊಂದಿಗೆ ಸಹಕರಿಸಲು, ಅವಳ ರಹಸ್ಯವನ್ನು ಬೇಧಿಸಲು ಮತ್ತು ತನ್ನೆಲ್ಲಾ ಬುದ್ಧಿವಂತಿಕೆಯನ್ನು ಬಳಸಿಕೊಂಡು ಅವಳ ಸಹಾಯವನ್ನು ಪಡೆಯಲು ಮಾಡಿದ ಸಾಹಸಗಳೆಲ್ಲ ಇದರಲ್ಲಿ ಅಭಿವ್ಯಕ್ತವಾಗಿದೆ.

ಇದು ಪಶ್ಚಿಮದ ಪ್ರೀತಿ-ಸಾಹಸದ ವೀರಗಾಥೆ, ಭೂಮಿಯನ್ನು ಸಕ್ರಿಯವಾಗಿ ಒಲಿಸಿಕೊಳ್ಳುವ ಕಥೆ. ನಾನು ಚಿಕ್ಕವನಾಗಿದ್ದಾಗ ಒಮ್ಮೆ ಬ್ರಿಂಡಿಸಿ ಎನ್ನುವ ಊರಿನಿಂದ ಕ್ಯಾಲೆ ಎನ್ನುವ ಊರಿಗೆ ರೈಲಿನಲ್ಲಿ ಪ್ರಯಾಣ ಮಾಡಿದ್ದೆ. ಆ ಪಯಣದಲ್ಲಿ ನನಗಾದ ತೀವ್ರ ಆನಂದ ಮತ್ತು ಬೆರಗು ಇನ್ನೂ ನೆನಪಿದೆ. ಯುರೋಪಿನ ಪರಿಶುದ್ಧ ಸೌಂದರ್ಯದ ಅನುಭವ ನನಗಾಯಿತು. ನಾನು ನೋಡಿದಲ್ಲೆಲ್ಲಾ ಅವಳ ಆರೋಗ್ಯಕರ ಕಾಂತಿ ಮತ್ತು ಸಮೃದ್ಧತೆ ಚಿಗುರೊಡೆದು ಮೆರೆಯುತ್ತಿತ್ತು. ಪಾಶ್ಚಿಮಾತ್ಯ ಮಾನವೀಯತೆಯೆಂಬ ಆದರ್ಶ ಸಖನ ಬಹುಕಾಲದ ಕಾಳಜಿಯು ಪ್ರಕೃತಿಯನ್ನು ಸಂರಕ್ಷಿಸಿತ್ತು. ಅವನು ಅವಳನ್ನು ಗೆದ್ದಿದ್ದ, ಅವಳನ್ನು ತನ್ನವಳನ್ನಾಗಿ ಮಾಡಿಕೊಂಡು, ಎಂದಿಗೂ ಬರಿದಾಗದ ಅವಳ ಹೃದಯದ ಔದಾರ್ಯವನ್ನು ಪಡೆದಿದ್ದ. ಪೌರಾತ್ಯ ಭಕ್ತನು ಮನಸ್ಸಿನ ಏಕಾಂತದಲ್ಲಿ ಅಂತರ್ಮುಖಿಯಾಗಿ ಸಾಕ್ಷಾತ್ಕರಿಸಿಕೊಳ್ಳುವ ಜಗತ್ತಿನ ಅಂತರಾತ್ಮದ ದರ್ಶನವನ್ನು ಸೇವೆಯ ಈ ಬಹಿರ್ಮುಖಿ ಅಭಿವ್ಯಕ್ತಿಯ ಚೇತನದೊಂದಿಗೆ, ಸಂಕೋಚದ ವಿಸ್ಮೃತಿಯಲ್ಲಿರುವ ಸೌಂದರ್ಯದ ಸಮೃದ್ಧಿ ಹಾಗೂ ಸೌಖ್ಯವನ್ನು ಪ್ರಕಟಪಡಿಸುವ ಇಚ್ಛಾಶಕ್ತಿಯ ಬಳಕೆಯೊಂದಿಗೆ ಸಮ್ಮಿಳಿತಗೊಳಿಸಬಹುದೆಂಬುದು ನನ್ನ ಆಶಯವಾಗಿತ್ತು.

ನನಗೆ ನೆನಪಿದೆ - ನನ್ನ ಮೇಜಿನ ಮೇಲಿದ್ದ ಹೂಕುಂಡದಿಂದ ಹಳೆ ಹೂವುಗಳನ್ನು ಇನ್ನೇನು ಬಿಸಾಡಬೇಕೆನ್ನುವಾಗ, ಭಿಕ್ಷುಕಿಯೊಬ್ಬಳು ತನ್ನ ಸೀರೆಯ ಸೆರಗಿನಲ್ಲಿ ಅದನ್ನು ತುಂಬಿಸಿಕೊಂಡು, ಮಧುರವಾದ ಭಾವಪರವಶತೆಯಿಂದ ಅದರಲ್ಲಿ ತನ್ನ ಮುಖವನ್ನು ಹುದುಗಿಸಿ - "ಓಹ್, ನನ್ನ ಹೃದಯದ ಒಲವೇ!" ಎಂದು ಉದ್ಗರಿಸಿದ್ದಳು. ಆ ಹೂವುಗಳ ಬಾಹ್ಯ ರೂಪದ ತೆರೆಯನ್ನು

ಆಕೆಯ ಕಣ್ಣುಗಳು ಸರಾಗವಾಗಿ ಭೇದಿಸಿದ್ದವು. ಇಲ್ಲಿ ಅವಳು ತನ್ನ ಪ್ರೀತಿಪಾತ್ರ ಮಹಾನ್ ವಿಶ್ವಮಾನವನ ನಿಕಟ ಸ್ಪರ್ಶವನ್ನು ಪಡೆದಿದ್ದಳು. ಇದೆಲ್ಲದರ ಹೊರತಾಗಿ, ಅವಳಲ್ಲಿ ಆರಾಧಿಸುವ, ಭೂಮಿಗೆ ತನ್ನ ಸೇವೆ ಸಲ್ಲಿಸಿ, ಹಾಳು ನೆಲದಲ್ಲಿ ಹೂವನ್ನು ತಂದು ಸೌಂದರ್ಯ ರಾರಾಜಿಸುವಂತೆ ಮಾಡುವ ಪಾಶ್ಚಾತ್ಯ ಸ್ವರೂಪದ ನೇರ ದೈವಿಕ ಸೇವೆಯ ಶಕ್ತಿಯಿರಲಿಲ್ಲ.. ಪಾಶ್ಚಾತ್ಯ ಮತ್ತು ಪೌರಾತ್ಯದ ಅವಳಿ ಚೇತನಗಳಾದ, ಮೇರಿ ಮತ್ತು ಮಾರ್ಥ, ಸತ್ಯದ ಪರಿಪೂರ್ಣ ಅರಿವನ್ನು ನೀಡಬಲ್ಲವು ಎನ್ನುವ ಮಾತನ್ನು ನಾನು ದೃಢವಾಗಿ ನಂಬುತ್ತೇನೆ. ಇವೆರಡರ ಮಿಲನ ಸಾಧ್ಯವಿಲ್ಲವೆನ್ನುವ ವಾದವನ್ನು ನಾನು ನಂಬಲು ಸಿದ್ಧನಿಲ್ಲ. ಪೂರ್ವದಲ್ಲಿನ ದೇಶಗಳಿಗೆ ಭೌತಿಕ ಬಡತನ ಹಾಗೂ ಕಾಲದ ಹಗೆತನವಿದ್ದಾಗ್ಯೂ ಸಹ ಈ ಮಿಲನಕ್ಕಾಗಿ ನಾನು ತಾಳ್ಮೆಯಿಂದ ಕಾಯುತ್ತೇನೆ.

ಪ್ರೀತಿಯ ಜೊತೆಗೆ, ಸಕ್ರಿಯ ಸಂವಹನ ಮತ್ತು ಬುದ್ಧಿವಂತಿಕೆಯ ಮಾರ್ಗಗಳಿಂದ ಮಾನವ ಮತ್ತು ಪ್ರಕೃತಿಯ ಪರಿಪಕ್ವ ಸಂಯೋಗದ ಮೊದಲ ಪಾಠವನ್ನು ಅಡೆತಡೆಯಿಲ್ಲದಂತೆ ಒದಗಿಸುವ ಶಾಲೆ ಎಂದಾಗ ನನ್ನ ಮನಸ್ಸಿನಲ್ಲಿ ಮೂಡುವುದು ರಾಬಿನ್ಸನ್ ಕ್ರೂಸೋನ ದ್ವೀಪ. ಜ್ಞಾನದ ಉದ್ದೇಶ ವಿವೇಕವೇ ಹೊರತು ಶುಷ್ಕ ಪಾಂಡಿತ್ಯವಲ್ಲ. ಪ್ರೀತಿ ಮತ್ತು ಕ್ರಿಯೆಗಳ ಮಾಧ್ಯಮದ ಮೂಲಕವೇ ಪರಿಪೂರ್ಣ ಜ್ಞಾನ ಪಡೆಯಲು ಸಾಧ್ಯ ಎನ್ನುವ ಸತ್ಯವನ್ನು ನಾವು ನೆನಪಿನಲ್ಲಿಡಬೇಕು. ಮಕ್ಕಳ ಅವಯವಗಳನ್ನು ಮತ್ತು ಮನಸ್ಸನ್ನು ಎಲ್ಲ ತುರ್ತು ಪರಿಸ್ಥಿತಿಗಳಿಗೆ ಸಜ್ಜುಗೊಳಿಸುವುದೇ ಒಂದು ಸಂಸ್ಥೆಯ ಮೂಲ ಉದ್ದೇಶವಾಗಿರಬಾರದು. ಜೀವನ ಮತ್ತು ಜಗತ್ತಿನ ಪ್ರತಿಕ್ರಿಯೆಗಳ ಸ್ವರಮೇಳದೊಂದಿಗಿನ ಪರಿಪೂರ್ಣ ಸ್ವರಸಂಗದ ಮೂಲಕ ಅವುಗಳ ಸಾಮರಸ್ಯದ ಸಮತೋಲನವನ್ನು ಕಂಡುಕೊಳ್ಳುವ ಉದ್ದೇಶವಿರಬೇಕು. ಇದೇ ವಿವೇಕ. ಇಂತಹ ಸ್ಥಳಗಳಲ್ಲಿ ಮಕ್ಕಳ ಮೊದಲ ಪ್ರಮುಖ ಪಾಠವೆಂದರೆ ಸಾಮಯಿಕ ಕಲ್ಪನೆ (iವಾಗಿmprovisation). ಸಿದ್ಧ ಮಾದರಿಗಳನ್ನು ನಿರಂತರ ಮಕ್ಕಳ ಮೇಲೆ ಹೇರುವುದನ್ನು ಸಂಪೂರ್ಣವಾಗಿ ತೊರೆದು, ಸಾಧನೆಯ ಅಚ್ಚರಿಯ ಮೂಲಕ ತಮ್ಮ ಸಾಮರ್ಥ್ಯಗಳನ್ನು ಕಂಡುಕೊಳ್ಳುವ ಅವಕಾಶ ಮಕ್ಕಳಿಗಿರಬೇಕು. ಇದರರ್ಥವನ್ನು ನೇರವಾಗಿ ಹೇಳಬೇಕೆಂದರೆ ಮಕ್ಕಳಿಗೆ ಕೊಡಬೇಕಿರುವುದು ಸರಳ ಜೀವನದ ಪಾಠವಲ್ಲ, ಸೃಜನಶೀಲ ಜೀವನದ ಪಾಠ. ಜೀವನ ಸಂಕೀರ್ಣವಾಗಬಹುದು. ಆದರೆ ಅದರ ಕೇಂದ್ರದಲ್ಲಿ ಜೀವಂತ ವ್ಯಕ್ತಿತ್ವವಿದ್ದರೆ ಅದಕ್ಕೆ ಸೃಷ್ಟಿಯೊಡನೆ ಸಂಯೋಗವಿರುತ್ತದೆ; ತನ್ನತನವನ್ನು ಪರಿಪೂರ್ಣ ಸಭ್ಯತೆಯಿಂದ ಸಂಭಾಳಿಸುತ್ತದೆ; ಆಗ ಅದು ಕೇವಲ ಗುಂಪನ್ನು ಹಿಗ್ಗಿಸುವ ಅನೇಕ ವಿಷಯಗಳಿಗೆ ಮತ್ತೊಂದು ಸೇರ್ಪಡೆಯೆನಿಸುವುದಿಲ್ಲ.

ಶಾಲೆಯಲ್ಲಿ ನನ್ನ ಕನಸೆಲ್ಲ ನನಸಾಗಿದೆ ಎಂದು ಹೇಳುವಂತಿದ್ದರೆ ಬಹಳ ಒಳ್ಳೆಯದಿತ್ತು. ನಾನು ಇದರೆಡೆಗೆ ಪ್ರಥಮ ಪರಿಚಯವನ್ನು ಮಾತ್ರ ನೀಡಿದ್ದೇನೆ. ಮಕ್ಕಳಿಗೆ ಪ್ರಕೃತಿಯನ್ನು ಪ್ರೀತಿಸಿ ಅದರ ಮೂಲಕ ಸ್ವಾತಂತ್ರ್ಯ ಶೋಧನೆಯಲ್ಲಿ ತೊಡಗಿಕೊಳ್ಳುವ ಅವಕಾಶ ಕೊಟ್ಟಿದ್ದೇನೆ. ಏಕೆಂದರೆ ಪ್ರೀತಿಸುವುದೇ ಸ್ವಾತಂತ್ರ್ಯ; ಅತ್ಯಂತ ಅಗ್ಗದ ವಸ್ತುಗಳಿಗೆ ನಮ್ಮ ಆತ್ಮದ ಬೆಲೆ ತೆರದಂತೆ ರಕ್ಷಿಸುವ ಪರಿಪೂರ್ಣ ಅಸ್ತಿತ್ವವನ್ನು ಅದು ನಮಗೆ ನೀಡುತ್ತದೆ. ಪ್ರೀತಿಯು ತನ್ನ ತಾತ್ಪರ್ಯದಿಂದ ಜಗತ್ತನ್ನು ಬೆಳಗಿಸಿ,, ಜೀವನಕ್ಕೆ ಎಲ್ಲೆಡೆಯಲ್ಲೂ "ಸಾಕಷ್ಟು" ಇದೆ ಎನ್ನುವ ಭಾವನೆ ಮೂಡಿಸುತ್ತದೆ.. ಇದೇ ನಿಜವಾದ ಸಂಭ್ರಮ. ಬಡತನದ ಆಧ್ಯಾತ್ಮಿಕ ಹಿರಿಮೆಯನ್ನು

ವೈಭವೀಕರಿಸಿ, ಸರಳ ಜೀವನ ಪಂಥವನ್ನು ಬೋಧಿಸುತ್ತಿರುವ ಕೆಲವರ ಪರಿಚಯ ನನಗಿದೆ. ಅದು ಕೇವಲ ನಕಾರಾತ್ಮಕವಾಗಿದ್ದಲ್ಲಿ, ಬಡತನಕ್ಕೆ ಯಾವುದೇ ವಿಶೇಷ ಮೌಲ್ಯವನ್ನು ಕಲ್ಪಿಸಿಕೊಳ್ಳುವುದನ್ನು ನಾನು ನಿರಾಕರಿಸುತ್ತೇನೆ. ಸತ್ಯದ ತೀಕ್ಷ್ಣ ಕರೆಗೆ ಓಗೊಡುವ ಸಂವೇದನಾಶಕ್ತಿಗೆ ಪ್ರತಿಸ್ಪಂದನೆ ನೀಡಲು ಸಾಧ್ಯವಿರುವ ಮನಸ್ಸು ಸಹಜವಾಗಿಯೇ ವಸ್ತುಗಳ ಹುಸಿ ಮೌಲ್ಯದ ಸೆಳೆತದಿಂದ ವಿಮುಖವಾಗುತ್ತದೆ. ನಿರ್ದಯತೆಯು, ಆನಂದಿಸುವ ನಮ್ಮ ಸರಳ ಸಾಮರ್ಥ್ಯವನ್ನು ಕಸಿಯುತ್ತದೆ. ವಸ್ತುಗಳ ಪ್ರದರ್ಶನ ಪ್ರಿಯ ಪ್ರತಿಷ್ಠೆಯ ಅನುಚಿತ ವರ್ತನೆ ಮತ್ತು ದುಬಾರಿ ವಸ್ತುಗಳ ತಿಳಿಗೇಡಿತನದ ಹೊರೆಯಲ್ಲಿ ನಮ್ಮನ್ನು ಮುಳುಗಿಸುತ್ತದೆ. ಹಾಗೆಂದು ಸನ್ಯಾಸದ ನಿರ್ದಯತೆಯನ್ನು ವಿಲಾಸಿ ಜೀವನದ ನಿರ್ದಯತೆಯ ಎದುರಾಳಿಯನ್ನಾಗಿ ಮಾಡುವುದರಿಂದ ಒಂದು ಕೆಡುಕಿನ ಸಹಾಯದಿಂದ ಇನ್ನೊಂದು ಕೆಡುಕಿನ ವಿರುದ್ಧ ಹೋರಾಡಿದಂತಾಗುತ್ತದೆ. ಮರಳುಗಾಡಿನ ನಿರ್ದಯ ಸೈತಾನನ ಬದಲು ಕಾಡಿನ ಅವಿವೇಕಿ ರಾಕ್ಷಸನನ್ನು ಬರಮಾಡಿಕೊಂಡಂತೆ.

ಪ್ರಕೃತಿಯ ಬಗ್ಗೆ ಮಕ್ಕಳ ಸಂವೇದನೆಯಲ್ಲಿ ಹೊಸತನವನ್ನು ಬೆಳೆಸಲು ನನ್ನ ಕೈಲಾದಷ್ಟೂ ಪ್ರಯತ್ನಪಟ್ಟಿದ್ದೇನೆ. ಜೊತೆಗೆ, ಸಾಹಿತ್ಯ, ಹಬ್ಬಗಳ ಆಚರಣೆ ಮತ್ತು ಪ್ರಪಂಚದಲ್ಲಿ ಎಲ್ಲರೊಡನೆ ಬೆರೆಯುವುದನ್ನು ಕಲಿಸುವ ಧಾರ್ಮಿಕ ಬೋಧನೆಯ ಮೂಲಕ ಮಕ್ಕಳು ತಮ್ಮ ಸುತ್ತಲಿನ ಮಾನವ ಸಂಬಂಧಗಳಲ್ಲಿ ಸಂವೇದನಾಶೀಲರಾಗುವಂತೆ ಮಾಡುವುದಕ್ಕೆ ಸಹ ಪ್ರಯತ್ನಪಟ್ಟಿದ್ದೇನೆ. ಇದರ ಮೂಲಕ ಅಳತೆಗೆ ಮೀರಿದ್ದನ್ನು ಪಡೆಯಲು ಪ್ರಯತ್ನಿಸಿದ್ದೇನೆ. ವಾದ್ಯವೊಂದರಿಂದ ಸಂಗೀತವನ್ನು ಹೊರಡಿಸುವ ಮೂಲಕ ಅದನ್ನು ನೈಜವಾಗಿಯೂ ಗಳಿಸಿಕೊಂಡಂತೆ.